ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಜೂನ್ ೩೦, ೨೦೧೬ (ಆಷಾಢ ೯, ಶಕ ವರ್ಷ ೧೯೩೮)<br>Bengaluru, Thursday, June 30, 2016 (Ashadha 9, Shaka Varsha 1938) | ಸಂಚಿಕೆ ೨೬<br>Issue 26 |
| --- | --- | --- |


# ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಪೊಲೀಸ್ ಇಲಾಖೆ**

**ಪೊಲೀಸ್ ತರಬೇತಿ ಶಾಲೆ, ಮೈಸೂರು ನಗರ, ಜ್ಯೋತಿನಗರ, ಮೈಸೂರು–570 019.**

**ಇಲ್ಲಿನ ಅನುಯಾಯಿ ಹುದ್ದೆಗಳ ನೇಮಕಾತಿ–2016**

**ಅಧಿಸೂಚನೆ ಸಂಖ್ಯೆ: 22/ಪಿಟಿಎಸ್/2015–16, ದಿನಾಂಕ: 12–5–2016**

**ವಿಷಯ:** ಅನುಯಾಯಿ (ಪುರುಷ & ಮಹಿಳೆ) ಹುದ್ದೆಗಳ ನೇರ ನೇಮಕಾತಿ –2016 ಕುರಿತು.

1) ಪೊಲೀಸ್ ತರಬೇತಿ ಶಾಲೆ, ಮೈಸೂರು ನಗರ, ಜ್ಯೋತಿನಗರ, ಮೈಸೂರು ಇಲ್ಲಿ ಖಾಲಿಯಿರುವ 21 ಅನುಯಾಯಿ ಹುದ್ದೆಗಳ ನೇಮಕಾತಿಗಾಗಿ ಕರ್ನಾಟಕ ರಾಜ್ಯ ಪೊಲೀಸ್ ಸೇವೆಗಳು, ಲಿಪಿಕ ವೃಂದ ಸೇರಿದಂತೆ (ನೇಮಕಾತಿ) ನಿಯಮಗಳು 2004, ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ಪ್ರಕಾರ ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ/ 140/ ಇಎಫ್‌ಎಸ್/ 2014, ದಿನಾಂಕ:28–10–2015 ಮತ್ತು ಮಾನ್ಯ ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ರಾಜ್ಯ, ಬೆಂಗಳೂರು ರವರ ಆದೇಶ ಸಂಖ್ಯೆ: 39/ಸಿಬ್ಬಂದಿ–3/2014–15, ದಿನಾಂಕ: 04–03–2016ರಲ್ಲಿ ಅನುಮತಿಸಿರುವಂತೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

2) ಅರ್ಜಿಗಳನ್ನು ಪ್ರಾಂಶುಪಾಲರು, ಪೊಲೀಸ್ ತರಬೇತಿ ಶಾಲೆ, ಜ್ಯೋತಿನಗರ, ಮೈಸೂರು ನಗರ–570 019 ರವರ ಕಛೇರಿಗೆ ಖುದ್ದಾಗಿ ಅಥವಾ ಅಂಚೆ ಮೂಲಕ ಸಲ್ಲಿಸಲು ತಿಳಿಸಲಾಗಿದೆ.

3) **ಅರ್ಜಿ ಶುಲ್ಕ:**

| | |
| --- | --- |
| ಸಾಮಾನ್ಯ ವರ್ಗ, 2(ಎ), 2(ಬಿ), 3(ಎ), 3(ಬಿ)ಗೆ ಸೇರಿದ ಅಭ್ಯರ್ಥಿಗಳಿಗೆ | ರೂ. 250/– |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳಿಗೆ | ರೂ. 100/– |

ನಿಗದಿತ ಶುಲ್ಕಕ್ಕೆ ಕೆನರಾ ಬ್ಯಾಂಕ್/ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಬ್ಯಾಂಕುಗಳ ಅಧಿಕೃತ ಶಾಖೆಗಳಿಂದ ಡಿ.ಡಿ.ಯನ್ನು "ಪ್ರಾಂಶುಪಾಲರು, ಪೊಲೀಸ್ ತರಬೇತಿ ಶಾಲೆ, ಮೈಸೂರು ನಗರ (Principal, Police Training School, Mysuru city) ರವರ ಹೆಸರಿನಲ್ಲಿ ಪಡೆದು ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸುವುದು. ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ಇತರೆ ಯಾವುದೇ ಪರೀಕ್ಷೆ/ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.

4) **ಅರ್ಜಿ ಸಲ್ಲಿಸುವ ವಿಧಾನ :** ನಿಗದಿತ ನಮೂನೆಯ ಅರ್ಜಿ ಹಾಗೂ ಮಾಹಿತಿ/ ಸೂಚನೆಗಳನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್ **www.ksp.gov.in**ನಲ್ಲಿ ಪ್ರಕಟಿಸಲಾಗಿದೆ. ಹಾಗೂ ಪ್ರಾಂಶುಪಾಲರು, ಪೊಲೀಸ್ ತರಬೇತಿ ಶಾಲೆ, ಮೈಸೂರು ನಗರ ಕಛೇರಿಯ ಸೂಚನಾ ಫಲಕದಲ್ಲೂ ಪ್ರಕಟಿಸಲಾಗಿರುತ್ತದೆ. ಅರ್ಜಿ ನಮೂನೆಯನ್ನು ಅಭ್ಯರ್ಥಿಗಳು ತಮ್ಮ ವೈಯಕ್ತಿಕ ಖರ್ಚಿನಲ್ಲಿ ಬೆರಳಚ್ಚು ಮಾಡಿಸಿ, ಪಾಸ್‌ಪೋರ್ಟ್ ಅಳತೆಯ–2 ಬಣ್ಣದ ಭಾವಚಿತ್ರ ಹಾಗೂ ಸಹಿಯೊಂದಿಗೆ ಅರ್ಜಿಯಲ್ಲಿರುವ ಎಲ್ಲಾ ವಿವರಗಳನ್ನು ಸಮರ್ಪಕವಾಗಿ ಭರ್ತಿಮಾಡಿ, ಪೊಲೀಸ್ ತರಬೇತಿ ಶಾಲೆ, ಜ್ಯೋತಿನಗರ, ಮೈಸೂರು ನಗರ ಕಛೇರಿಗೆ ಸಲ್ಲಿಸುವುದು.

- ಅರ್ಜಿ ಸಲ್ಲಿಸಲು ಪ್ರಾರಂಭದ ದಿನಾಂಕ: 6–6–2016 ಬೆಳಿಗ್ಗೆ 10 ಗಂಟೆಯಿಂದ.
- ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 5–7–2016 ಸಂಜೆ 05 ಗಂಟೆಯವರೆಗೆ.

**ಸೂಚನೆ :**

- ನಿಗದಿತ ದಿನಾಂಕ ಹಾಗೂ ಸಮಯದೊಳಗೆ ಸಲ್ಲಿಸಲಾಗುವ ಅರ್ಜಿಗಳನ್ನು ಮಾತ್ರ ಪರಿಗಣಿಸಲಾಗುವುದು.
- ಅಂಚೆ ಮೂಲಕ ಸಲ್ಲಿಸುವ ಅರ್ಜಿಗಳು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಈ ಕಛೇರಿಗೆ ತಲುಪದಿದ್ದಲ್ಲಿ, ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲವೆಂದು ತಿಳಿಸಲಾಗಿದೆ.
- ಈ ಕೆಳಗೆ ನಮೂದಿಸಿರುವ ಖಾಲಿ ಹುದ್ದೆಗಳ ಸಂಖ್ಯೆ ತಾತ್ಕಾಲಿಕವಾಗಿದ್ದು, ಅವಶ್ಯಕತೆ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಬದಲಾವಣೆ ಮಾಡಲಾಗುವುದು.

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತರಾದ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರೆ |
|---|---|---|---|---|---|---|---|
| ಸಾಮಾನ್ಯ ವರ್ಗ | 10 | 3 | 3 | 1 | – | – | 3 |
| ಪರಿಶಿಷ್ಟ ಜಾತಿ | 3 | 1 | 1 | – | – | – | 1 |
| ಪರಿಶಿಷ್ಟ ಪಂಗಡ | 1 | – | – | – | – | – | 1 |
| ಪ್ರವರ್ಗ–1 | 1 | – | – | – | – | – | 1 |
| ಪ್ರವರ್ಗ–2ಎ | 3 | 1 | 1 | – | – | – | 1 |
| ಪ್ರವರ್ಗ–2ಬಿ | 1 | – | – | – | – | – | 1 |
| ಪ್ರವರ್ಗ–3ಎ | 1 | – | – | – | – | – | 1 |
| ಪ್ರವರ್ಗ–3ಬಿ | 1 | – | – | – | – | – | 1 |
| **ಒಟ್ಟು** | **21** | **5** | **5** | **1** | – | – | **10** |

**ಖಾಲಿಯಿರುವ 21 ಅನುಯಾಯಿ ಹುದ್ದೆಗಳಲ್ಲಿ ವೃತ್ತಿವಾರು (Trade) ಹುದ್ದೆಗಳನ್ನು ಭರ್ತಿ ಮಾಡಬೇಕಾದ ವಿವರಗಳು ಕೆಳಕಂಡಂತಿವೆ.**

| ಕ್ರ. ಸಂ. | ವೃತ್ತಿ (Trade) | ಮಂಜೂರಾತಿ ಬಲ/ಖಾಲಿ ಹುದ್ದೆಗಳು |
|---|---|---|
| 1 | ಡ್ರೈ ಸ್ವೀಪರ್ | 04 |
| 2 | ವೆಟ್ ಸ್ವೀಪರ್ | 05 |
| 3 | ಕುಕ್ (ಸಸ್ಯಹಾರಿ ಮತ್ತು ಮಾಂಸಹಾರಿ) | 03 |
| 4 | ದೋಭಿ | 03 |
| 5 | ಜೋಡು ಹೊಲಿಯುವವ (Cobbler) | 01 |
| 6 | ತೋಟಮಾಲಿ (Gardner) | 01 |
| 7 | ದರ್ಜಿ (Tailor) | 01 |
| 8 | ಎಲೆಕ್ಟ್ರಿಷಿಯನ್ | 01 |
| 9 | ಪ್ಲಂಬರ್ | 01 |
| 10 | ಕಾರ್ಪೆಂಟರ್ | 01 |
| **ಒಟ್ಟು** | | **21** |

**ಟಿಪ್ಪಣಿ :** ಅನುಯಾಯಿ ಹುದ್ದೆಗಳಲ್ಲಿ ವೃತ್ತಿವಾರು ಖಾಲಿಯಿರುವ ಹುದ್ದೆಗಳನ್ನು ಭರ್ತಿಮಾಡುವಾಗ, ಮೇಲೆ ಅಧಿಸೂಚನೆ ಹೊರಡಿಸಿರುವ ಪ್ರವರ್ಗವಾರು ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ (ಎಸ್‌ಸಿ/ಎಸ್‌ಟಿ ಹೊರತು ಪಡಿಸಿ) ಸದರಿ ಖಾಲಿ ಹುದ್ದೆಗಳನ್ನು ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ/08/ಸೆಹಿಮ/95, ದಿನಾಂಕ:20–06–1995ರನ್ವಯ ಸಾಮಾನ್ಯ ವರ್ಗದ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು ಮತ್ತು ನಷ್ಟಗೊಂಡ ರಿಕ್ತ ಸ್ಥಾನಗಳನ್ನು ಮುಂದಿನ ಕ್ಯಾಲೆಂಡರ್ ವರ್ಷ ಅಥವಾ ತದನಂತರದ ಎರಡು ಕ್ಯಾಲೆಂಡರ್ ವರ್ಷಗಳಲ್ಲಿ ನೇರ ನೇಮಕಾತಿಗಳಲ್ಲಿ ಸರಿದೂಗಿಸಿಕೊಳ್ಳಲಾಗುವುದು.

2. ಗ್ರಾಮೀಣ, ಮಾಜಿ ಸೈನಿಕರು, ಮಹಿಳಾ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಅಂಥಹ ಖಾಲಿ ಹುದ್ದೆಗಳನ್ನು ಮೇಲೆ ನಮೂದಿಸಿರುವ ಅದೇ ಪ್ರವರ್ಗದ ಇತರೆ ಅಭ್ಯರ್ಥಿಗಳಿಂದ ತುಂಬಲಾಗುವುದು.

5) **ಅರ್ಹತಾ ಷರತ್ತುಗಳು :**

i. ಭಾರತೀಯನಾಗಿರತಕ್ಕದ್ದು.

ii. ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿಯಿರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

iii. ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತನಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವವಿರುವ ಯಾವುದೇ ದೈಹಿಕ ನ್ಯೂನ್ಯತೆಯಿಂದ ಮುಕ್ತರಾಗಿರಬೇಕು.

**6) ವಯೋಮಿತಿ :**

**i. ಸಾಮಾನ್ಯ ಮತ್ತು ಮಹಿಳಾ ಅಭ್ಯರ್ಥಿಗಳಿಗೆ :**

ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಂದರೆ ದಿನಾಂಕ: 5–7–2016ಕ್ಕೆ ಅಭ್ಯರ್ಥಿಗೆ ಕನಿಷ್ಠ 19 ವರ್ಷ ವಯಸ್ಸಾಗಿರಬೇಕು ಹಾಗೂ ಈ ಕೆಳಕಂಡ ವಯಸ್ಸು ಮೀರಿರಬಾರದು.

ಅ) ಪರಿಶಿಷ್ಠ ಜಾತಿ, ಪರಿಶಿಷ್ಟ ಪಂಗಡ ಹಾಗೂ ಇತರೆ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ 30 ವರ್ಷಗಳು.

ಆ) ಇತರೆ (ಸಾಮಾನ್ಯ) ಅಭ್ಯರ್ಥಿಗಳಿಗೆ 25 ವರ್ಷಗಳು.

**ii. ಮಾಜಿ ಸೈನಿಕ ಅಭ್ಯರ್ಥಿಗಳಿಗೆ:**

ಮಾಜಿ ಸೈನಿಕ ಅಭ್ಯರ್ಥಿಯು ಸೈನ್ಯ ವಿಯೋಜನೆ, ಸೇವೆಯಿಂದ ತೆಗೆದುಹಾಕಿದ ಹಾಗೂ ಸೇವಾ ನಿವೃತ್ತಿ ಹೊಂದಿದ ಕಾರಣದಿಂದ ಬಿಡುಗಡೆಯಾದ ಮಾಜಿ ಯೋಧರಾಗಿದ್ದಲ್ಲಿ "ಅವರು ಸೇವೆ ಸಲ್ಲಿಸಿದ ಅವಧಿ"ಯ ಜೊತೆಗೆ ಹೆಚ್ಚುವರಿ 03 ವರ್ಷಗಳ ರಿಯಾಯಿತಿಗಳನ್ನು ನೀಡಲಾಗುವುದು. ಮಾಜಿ ಯೋಧ ಎಂಬ ಶಬ್ದವು ಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಾವಳಿಗಳಲ್ಲಿನ ಪರಿಭಾಷೆಯ ಅರ್ಥ ಹೊಂದಿದೆ.

**iii. ಮಾಜಿ ಸೈನಿಕರ ಬಗ್ಗೆ ವಿವರಣೆ:**

ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂಸೇನೆ, ನೌಕಾಸೇನೆ ಮತ್ತು ವಾಯುಸೇನೆಯಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧರಲ್ಲದ ಹುದ್ದೆಗಳಲ್ಲಿ) ಸೇವೆ ಸಲ್ಲಿಸಿದ ವ್ಯಕ್ತಿ. ಆದರೆ ಡಿಫೇನ್ಸ್ ಸೆಕ್ಯುರಿಟಿ ಕೋರ್ (Defence Security Corps), ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್ (General Reserved Engineering Force), ಲೋಕ್ ಸಹಾಯಕ್ ಸೇನಾ (Lok sahayak Sena) ಮತ್ತು ಪ್ಯಾರಾ ಮಿಲಿಟರಿ ದಳ (Para Military Forces)ದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ ಮತ್ತು

(ಅ) ಅಂತಹ ಸೇನೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

ಅಥವಾ

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಲ್ಲಿ ಬಿಡುಗಡೆಯಾದವನು.

ಅಥವಾ

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

ಅಥವಾ

(ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು:

1. ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.
2. ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.
3. ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

**ವಿವರಣೆ:** ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

iv) ಭಾರತ ಸರ್ಕಾರದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ:36034/27/84–ಸಿಬ್ಬಂದಿ(ಎಸ್‌ಸಿಟಿ), ದಿನಾಂಕ: 2–5–1985 ರನ್ವಯ ಮಾಜಿ ಸೈನಿಕರು ಅವರಿಗೆ ನೀಡಿರುವ ಪ್ರಯೋಜನವಾದ ಪುನರ್ ನೇಮಕವನ್ನು ಉಪಯೋಗಿಸಿಕೊಂಡು ಒಂದು ಬಾರಿ ಸರ್ಕಾರಿ ಹುದ್ದೆಗೆ ಆಯ್ಕೆಯಾದಲ್ಲಿ ಅಂತಹ ಮಾಜಿ ಸೈನಿಕರ ಸ್ಥಾನವು ಸರ್ಕಾರಿ ಉದ್ಯೋಗದ ಪುನರ್ ನೇಮಕಕ್ಕೆ ರದ್ದಾಗುತ್ತದೆ. ಕರ್ನಾಟಕ ಸರ್ಕಾರದ ಪತ್ರ ಸಂಖ್ಯೆ:ಒಇ/90/ಪೊಸಿಅ/2005, ದಿನಾಂಕ: 2–2–2006ರ ಪತ್ರದಲ್ಲಿ ದಿನಾಂಕ: 2–5–1985ರ ಕೇಂದ್ರ ಸರ್ಕಾರದ ಅಧಿಕೃತ ಜ್ಞಾಪನದಲ್ಲಿನ ಮಾರ್ಗಸೂಚಿಯನ್ವಯ ಕ್ರಮ ಕೈಗೊಳ್ಳುವಂತೆ ಸೂಚಿಸಲಾಗಿರುತ್ತದೆ. ಈ ವಿಷಯದ ಕುರಿತು ವೃಂದ ಮತ್ತು ನೇಮಕಾತಿ ನಿಯಮವಾದ ಕರ್ನಾಟಕ ರಾಜ್ಯ ಪೊಲೀಸ್ ಲಿಪಿಕ ಸೇವೆಗಳ ಸೇರಿದಂತೆ (ನೇಮಕಾತಿ) (ತಿದ್ದುಪಡಿ) ನಿಯಮ, 2009 ರಲ್ಲಿಯೂ ಸಹ ನಿಗದಿಪಡಿಸಲಾಗಿದೆ. ಆದ್ದರಿಂದ ಒಂದು ಬಾರಿ ಮಾಜಿ ಸೈನಿಕ ಮೀಸಲಾತಿಯನ್ನು ಉಪಯೋಗಿಸಿ ಸರ್ಕಾರಿ ಹುದ್ದೆಗೆ ಆಯ್ಕೆಯಾದ ಮಾಜಿ ಸೈನಿಕರು ಮತ್ತೊಮ್ಮೆ ಸದರಿ ಮೀಸಲಾತಿಯನ್ನು ಕೋರಲು ಬರುವುದಿಲ್ಲ. ಅಂತಹ ಮಾಜಿ ಸೈನಿಕ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು. (ಈ ಕಾರಣದಿಂದ ಮಾಜಿ ಸೈನಿಕರು ಕಡ್ಡಾಯವಾಗಿ ಅರ್ಜಿಯಲ್ಲಿ ನಿಗದಿಪಡಿಸಲಾಗಿರುವ ಕಾಲಂನ್ನು ಭರ್ತಿ ಮಾಡತಕ್ಕದ್ದು ಹಾಗೂ ಭೂಸೇನೆ/ನೌಕಸೇನೆ/ವಾಯುಸೇನೆಯಲ್ಲಿ ಸೇವೆ ಸಲ್ಲಿಸಿದಷ್ಟು ಅವಧಿಯನ್ನು ಕಡ್ಡಾಯವಾಗಿ ಭರ್ತಿ ಮಾಡತಕ್ಕದ್ದು).

v) ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕದ ನಂತರ ಯಾವೊಬ್ಬ ಮಾಜಿ ಸೈನಿಕ ಅಭ್ಯರ್ಥಿಯು ಸರ್ಕಾರಿ ನೌಕರಿಯೊಂದಕ್ಕೆ ಮಾಜಿ ಸೈನಿಕ ಮೀಸಲಾತಿ ಪಡೆದು ಸೇರಿದರೆ, ಅಂತಹ ಮಾಜಿ ಸೈನಿಕ ತಾನು ನೌಕರಿ ಸೇರಿದ ಬಗ್ಗೆ ಸಂಬಂಧಪಟ್ಟ ಪೊಲೀಸ್ ಅಧೀಕ್ಷಕರ ಕಛೇರಿಗೆ ಮಾಹಿತಿ ನೀಡತಕ್ಕದ್ದು. ಮಾಹಿತಿ ನೀಡದೆ ತದನಂತರ ತಿಳಿದುಬಂದಲ್ಲಿ ಅಂತಹ ಮಾಜಿ ಸೈನಿಕ ಅಭ್ಯರ್ಥಿಯ ಅಭ್ಯರ್ಥಿತನವನ್ನು ರದ್ದು ಪಡಿಸಲಾಗುವುದು. ಇಂತಹ ಅಭ್ಯರ್ಥಿಯು ಮಾಜಿ ಸೈನಿಕ ಮೀಸಲಾತಿಗೆ ಅನರ್ಹನಾಗುತ್ತಾನೆ.

vi) ಮಾಜಿ ಯೋಧ ಎಂಬ ಶಬ್ದವು ಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಾವಳಿಗಳಲ್ಲಿನ ಪರಿಭಾಷೆಯ ಅರ್ಥ ಹೊಂದಿದೆ.

vii) ಕೆ.ಸಿ.ಎಸ್(ಸಾಮಾನ್ಯ ನೇಮಕಾತಿ) ನಿಯಮ 9(1) ರನ್ವಯ ಕೇಂದ್ರ ಸಶಸ್ತ್ರದಳದಲ್ಲಿ ಸೇವೆ ಸಲ್ಲಿಸುವಾಗ ಹತರಾದ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಮಾಜಿ ಸೈನಿಕ ಮಕ್ಕಳಿಗೆ ವಯೋಮಿತಿ ಸಡಿಲಿಕೆ ಇತ್ಯಾದಿಯಲ್ಲಿ ಯಾವುದೇ ತರಹದ ವಿನಾಯಿತಿಯನ್ನು ನೀಡಲಾಗುವುದಿಲ್ಲ. ಕರ್ತವ್ಯ ನಿರ್ವಹಿಸುತ್ತಿದ್ದ ಕೇಂದ್ರ ಸಶಸ್ತ್ರದಳದ ಅಧಿಕಾರಿಗಳಿಂದ ಅವಲಂಭಿತ ಪ್ರಮಾಣ ಪತ್ರ ಮತ್ತು ಸೈನಿಕ ಬೋರ್ಡ್‌ನಿಂದ ಪ್ರಮಾಣ ಪತ್ರವನ್ನು ಅರ್ಜಿಯನ್ನು ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕ: 5–7–2016ರೊಳಗಾಗಿ ಪಡೆದಿಟ್ಟುಕೊಂಡಿರತಕ್ಕದ್ದು.

**ಟಿಪ್ಪಣಿ:** ಮೇಲಿನ ಷರತ್ತಿನ ಪ್ರಕಾರ ಮಾಜಿ ಸೈನಿಕ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಯಮಾನುಸಾರ ಆ ಮೀಸಲಾತಿಗೆ ಅರ್ಹರೆ? ಎಂಬುದನ್ನು ಹತ್ತಿರದ ಜಿಲ್ಲಾ ಸೈನಿಕ ಬೋರ್ಡ್‌ನಿಂದ ತಿಳಿದುಕೊಂಡು ಮೀಸಲಾತಿಯನ್ನು ಕೋರುವುದು ಸೂಕ್ತ.

7) **ವಿದ್ಯಾರ್ಹತೆ :**

ಅನುಯಾಯಿ ಹುದ್ದೆಗೆ 7ನೇ ತರಗತಿಯನ್ನು ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

**ಆದ್ಯತೆ (Preference) :**

ಅರ್ಜಿದಾರರು ಅರ್ಜಿ ಸಲ್ಲಿಸುವ ಹುದ್ದೆಗೆ ಸಂಬಂಧಿಸಿದ ವೃತ್ತಿಪರ (**Trade**) ಶಿಕ್ಷಣದಲ್ಲಿ ನೈಪುಣ್ಯತೆ ಹೊಂದಿದವರಿಗೆ ಆದ್ಯತೆ ನೀಡಲಾಗುವುದು.

**ಟಿಪ್ಪಣಿ :**

1. ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದದೇ ಇರುವ ಅಭ್ಯರ್ಥಿಗಳ ಅರ್ಜಿಯನ್ನು ತಿರಸ್ಕರಿಸಲಾಗುವುದು. ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ನಿಗದಿತ ವಿದ್ಯಾರ್ಹತೆ ಪಡೆಯಲು ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಹರಾಗಿರುವುದಿಲ್ಲ.
2. ನಿಗದಿತ ವಿದ್ಯಾರ್ಹತೆಯನ್ನು ಹೊರತುಪಡಿಸಿ, ಬೇರೆ ಯಾವ ವಿದ್ಯಾರ್ಹತೆಯನ್ನು ಪರಿಗಣಿಸಲಾಗುವುದಿಲ್ಲ. ಕೊನೆಯ ದಿನಾಂಕಕ್ಕೆ ಎಲ್ಲಾ ಅಭ್ಯರ್ಥಿಗಳು 7ನೇ ತರಗತಿ ಪರೀಕ್ಷೆಯಲ್ಲಿ ಉತ್ತೀರ್ಣಹೊಂದಿದ ಅಂಕಪಟ್ಟಿಯನ್ನು ಹೊಂದಿರಬೇಕು.

8) **ಖಾಯಂ ಪೂರ್ವ ಅವಧಿ, ವೇತನ ಶ್ರೇಣಿ ಮತ್ತು ಪಿಂಚಣಿ ಸೌಲಭ್ಯ :**

ಅ) ನೇಮಕಾತಿಯಾದ ಅಭ್ಯರ್ಥಿಗಳು 2 ವರ್ಷದ ಖಾಯಂಪೂರ್ವ ಅವಧಿಯಲ್ಲಿರುತ್ತಾರೆ.

ಆ) ವೇತನ ಶ್ರೇಣಿ ರೂ. 10400–200–12000–250–13000–300–14200–350–15600–400–16400.

ಇ) ಪಿಂಚಣಿ ಸೌಲಭ್ಯ: ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ(ಎಸ್‌ಪಿಎಲ್)/04/ಪಿಇಟಿ/2005, ದಿನಾಂಕ:31–03–2006ರಂತೆ ನೂತನ ಅಂಶದಾಯಿ ಪಿಂಚಣಿ ಸೌಲಭ್ಯ ಅನ್ವಯವಾಗುವುದು.

9) **ಆಯ್ಕೆ / ಲಿಖಿತ ಪರೀಕ್ಷೆ :**

ಕರ್ನಾಟಕ ರಾಜ್ಯ ಪೊಲೀಸ್ ಸೇವೆಗಳು, ಲಿಪಿಕ ವೃಂದ ಸೇರಿದಂತೆ (ನೇಮಕಾತಿ) ನಿಯಮಗಳು 2004ರ ಪ್ರಕಾರ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳಲ್ಲಿ, ಅರ್ಹ ಅಭ್ಯರ್ಥಿಗಳಿಗೆ ಕನ್ನಡದಲ್ಲಿ ಪ್ರಬಂಧವನ್ನೊಳಗೊಂಡ 50 ಅಂಕಗಳ ಲಿಖಿತ ಪರೀಕ್ಷೆಯನ್ನು ಮೈಸೂರು ನಗರದಲ್ಲಿ ನಡೆಸಲಾಗುವುದು.

ಅಭ್ಯರ್ಥಿಗಳು ಲಿಖಿತ ಪರೀಕ್ಷೆಗೆ ಹಾಜರಾಗುವಾಗ ಕರೆಪತ್ರದ ಜೊತೆಗೆ ಈ ಕೆಳಕಂಡ ಯಾವುದಾದರೊಂದು ದೃಢೀಕೃತ ಗುರುತಿನ ಚೀಟಿಯನ್ನು ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.

1. ಪಾಸ್‌ಪೋರ್ಟ್
2. ಚಾಲನಾ ಪರವಾನಗಿ ಪತ್ರ
3. ಪ್ಯಾನ್ ಕಾರ್ಡ್
4. ರಾಜ್ಯ ಸರ್ಕಾರ/ಕೇಂದ್ರ ಸರ್ಕಾರ/ ಸಾರ್ವಜನಿಕ ಸ್ವಾಮ್ಯದ ಅಥವಾ ಸರ್ಕಾರದ ಅಧೀನಕ್ಕೊಳಪಟ್ಟ ಖಾಸಗಿ ಕಂಪನಿಗಳು ವಿತರಿಸಿರುವ ಭಾವಚಿತ್ರವಿರುವ ಸೇವಾ ಗುರುತಿನ ಚೀಟಿ
5. ಬ್ಯಾಂಕ್ ಪಾಸ್ ಪುಸ್ತಕ
6. ಭಾವಚಿತ್ರ ಸಮೇತ ನೋಂದಣಿಯಾಗಿರುವ ಸ್ವತ್ತಿನ ದಾಖಲೆ ಪತ್ರ ಅಥವಾ ಪಟ್ಟಾ ಪುಸ್ತಕ
7. ಜಾತಿ ಪ್ರಮಾಣ ಪತ್ರ
8. ಚುನಾವಣಾ ಆಯೋಗದ ಫೋಟೋ ಗುರುತಿನ ಚೀಟಿ
9. ಆಧಾರ್ ಕಾರ್ಡ್

ಲಿಖಿತ ಪರೀಕ್ಷೆಯ ಫಲಿತಾಂಶದ ಆಧಾರದ ಮೇಲೆ ಅಧಿಸೂಚನೆ ಹೊರಡಿಸಿರುವ ಪ್ರವರ್ಗವಾರು ಹುದ್ದೆಗಳಿಗೆ ಅನುಗುಣವಾಗಿ ಪ್ರತಿಯೊಂದು ಹುದ್ದೆಗೆ 1:5ರ ಅನುಪಾತದಲ್ಲಿ ಅರ್ಹ ಅಭ್ಯರ್ಥಿಗಳಿಗೆ ನೈಪುಣ್ಯತೆ ಪರೀಕ್ಷೆಯನ್ನು (Proficiency Test) 50 ಅಂಕಗಳಿಗೆ

ಮಾಡಲಾಗುವುದು. ನಂತರ ಸದರಿ ಅಭ್ಯರ್ಥಿಗಳಿಗೆ ವೈದ್ಯಕೀಯ ಪರೀಕ್ಷೆ ಹಾಗೂ ಮೂಲ ದಾಖಲಾತಿಗಳ ಪರೀಕ್ಷೆ ನಡೆಸಲಾಗುವುದು. ಅಭ್ಯರ್ಥಿಗಳು ವೈದ್ಯಕೀಯ ಪರೀಕ್ಷೆಗೆ ನೇಮಕಾತಿ ಸಮಿತಿಯು ರಚಿಸುವ ವೈದ್ಯಕೀಯ ಮಂಡಳಿಯ ಮುಂದೆ ಹಾಜರಾಗತಕ್ಕದ್ದು, ಹಾಜರಾಗುವ ವೇಳೆ, ಸ್ಥಳ ಹಾಗೂ ವೈದ್ಯಕೀಯ ಪರೀಕ್ಷೆಯ ವಿವರಗಳನ್ನು ನೇಮಕಾತಿ ಪ್ರಾಧಿಕಾರವು ನಿಗದಿಪಡಿಸುವುದು. ವೈದ್ಯಕೀಯ ಮಂಡಳಿಯು ದೈಹಿಕವಾಗಿ ಅರ್ಹರೆಂದು ಪ್ರಮಾಣೀಕರಿಸಿದ ಅಭ್ಯರ್ಥಿಗಳು ಮಾತ್ರ ನೇಮಕಾತಿಗೆ ಅರ್ಹರಾಗುವರು.

ತದನಂತರ, ಲಿಖಿತ ಪರೀಕ್ಷೆ ಮತ್ತು ನೈಪುಣ್ಯತೆ ಪರೀಕ್ಷೆಗಳಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಅಧಿಸೂಚನೆ ಹೊರಡಿಸಿರುವ ಖಾಲಿ ಹುದ್ದೆಗಳಿಗೆ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗುವುದು. ಆಯ್ಕೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಮೊದಲು ಅಂಕಪಟ್ಟಿ ಪರಿಶೀಲನೆ, ಅಭ್ಯರ್ಥಿಗಳ ಗುಣ ಮತ್ತು ನಡತೆ ಹಾಗೂ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳ ಪರಿಶೀಲನೆಯನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಮಾಡಿಸಿ, ನಂತರ ನಿಯಮಾನುಸಾರ ಅರ್ಹ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡಲಾಗುವುದು.

ನೇಮಕಾತಿಯಾದ ನಂತರ ಅಭ್ಯರ್ಥಿಗಳಿಗೆ ನೇಮಕಾತಿ ಪ್ರಾಧಿಕಾರವು ಅವರುಗಳು ಆಯ್ಕೆಯಾದ ವೃತ್ತಿಗನುಗುಣವಾಗಿ ಕರ್ತವ್ಯ ಹಂಚಿಕೆಯನ್ನು ಮಾಡಲಾಗುವುದು. ಅದರಂತೆ ಅಭ್ಯರ್ಥಿಗಳು ಕರ್ತವ್ಯ ನಿರ್ವಹಿಸುವುದು. ತಪ್ಪಿದಲ್ಲಿ ನೇಮಕಾತಿ ಆದೇಶವನ್ನು ರದ್ದುಪಡಿಸಲಾಗುವುದು.

**10) ಜಾತಿ ಮೀಸಲಾತಿ ಪ್ರಮಾಣ ಪತ್ರಗಳು :**

ಜಾತಿ ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಈ ಕೆಳಕಂಡ ನಮೂನೆಗಳಲ್ಲಿ ಪ್ರಮಾಣ ಪತ್ರವನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು.

ಎ) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ಪಡೆದ ನಮೂನೆ–ಡಿ ಪ್ರಮಾಣ ಪತ್ರ.

ಬಿ) ಪ್ರವರ್ಗ–1 ವರ್ಗದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ಪಡೆದ ನಮೂನೆ–ಇ ಪ್ರಮಾಣ ಪತ್ರ.

ಸಿ) ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ವರ್ಗದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ಪಡೆದ ನಮೂನೆ–ಎಫ್ ಪ್ರಮಾಣ ಪತ್ರ.

**ಸೂಚನೆ:** ನಮೂನೆ–ಎಫ್ ಪ್ರಮಾಣ ಪತ್ರವು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕ: 5–7–2016 ಕ್ಕೆ ಐದು ವರ್ಷಕ್ಕಿಂತ ಹಳೆಯದಾಗಿರಬಾರದು.

**11) ಗ್ರಾಮೀಣ ಮೀಸಲಾತಿ:**

ಎ) ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಯು 1ನೇ ತರಗತಿಯಿಂದ 7ನೇ ತರಗತಿಯವರೆಗೆ ಗ್ರಾಮೀಣ ಪ್ರದೇಶದಲ್ಲಿ ವಿದ್ಯಾಭ್ಯಾಸ ಹೊಂದಿರಬೇಕು.

ಬಿ) ಅಭ್ಯರ್ಥಿಯು ವ್ಯಾಸಂಗ ಮಾಡಿದ ಸ್ಥಳವು ವ್ಯಾಸಂಗ ಮಾಡಿದ ಅವಧಿಯಲ್ಲಿ ಅಂದಿನ ಕರ್ನಾಟಕ ಪೌರ ನಿಗಮಗಳ ಅಧಿನಿಯಮ 1976ರ ಅಥವಾ ಕರ್ನಾಟಕ ಪೌರಸಭೆಗಳ ಅದಿನಿಯಮ, 1964ರ ಅಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆಯ ಹಂತದಲ್ಲಿರುವ ಪ್ರದೇಶಗಳ ಹೊರತಾಗಿ ಇತರ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಯಾಗಿರಬೇಕು.

ಸಿ) ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಯು ಕರ್ನಾಟಕ ಅಧಿಸೂಚನೆ ಸಂಖ್ಯೆ:ಸಿಆಸುಇ//08/ಸೆನೇನಿ/2001, ದಿನಾಂಕ: 13–02–2001ರ ಪ್ರಕಾರ ಮೇಲೆ ಪರಿಭಾಷಿಸಿದಂತೆ ತರಗತಿ 1 ರಿಂದ 7ನೇ ತರಗತಿಯವರೆಗೆ ಗ್ರಾಮೀಣ ಪ್ರದೇಶದಲ್ಲಿ ವಿದ್ಯಾಭ್ಯಾಸ ಹೊಂದಿರುವವರು ಸರ್ಕಾರಿ ಆದೇಶ ಸಂಖ್ಯೆ. ಸಿಆಸುಇ/96/ಸೆನೇನಿ/2005, ದಿನಾಂಕ: 10.08.2005ರಲ್ಲಿ ನಿಗದಿಪಡಿಸಿದ ನಮೂನೆ–2ರ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಶಾಲಾ ಮುಖ್ಯೋಪಾಧ್ಯಾಯರಿಂದ ಸಹಿ ಮಾಡಿಸಿ ಮತ್ತು ವ್ಯಾಪ್ತಿಯ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿದ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆಯುವುದು. ನಮೂನೆ–1 (ನಾನ್–ಕ್ರೀಮಿ ಲೇಯರ್) ಮತ್ತು ನಮೂನೆ–2 ಇವುಗಳು ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ಅಭ್ಯರ್ಥಿಗಳಿಗೆ ಕಡ್ಡಾಯವಾಗಿರುತ್ತದೆ.

ಡಿ) ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ಸೇರಿದ ಅಭ್ಯರ್ಥಿಗಳು ನಮೂನೆ–2ರಲ್ಲಿ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಪಡೆದು ಸಲ್ಲಿಸುವುದು.

**ಸೂಚನೆ:** ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅಂತಹ ಅಭ್ಯರ್ಥಿಗಳು Non-Creamy Layer ಪ್ರಮಾಣ ಪತ್ರವನ್ನು ಹೊಂದಿರದಿದ್ದಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

**12) ಪ್ರಮುಖವಾದ ಸೂಚನೆಗಳು :**

ಅಭ್ಯರ್ಥಿಗಳು ಕೋರುವ ಮೀಸಲಾತಿಗನುಗುಣವಾಗಿ ಈ ಕೆಳಕಂಡ ಪ್ರಮಾಣ ಪತ್ರಗಳ ದೃಢೀಕೃತ ನಕಲು ಪ್ರತಿಗಳನ್ನು ಅರ್ಜಿಯೊಂದಿಗೆ ತಪ್ಪದೇ ಲಗತ್ತಿಸತಕ್ಕದ್ದು.

ಎ) ವಿದ್ಯಾರ್ಹತೆಯ ಅಂಕಪಟ್ಟಿ.

ಬಿ) ಹುಟ್ಟಿದ ದಿನಾಂಕದ ಪ್ರಮಾಣ ಪತ್ರ (ಜನನ ಪ್ರಮಾಣ ಪತ್ರ)

ಸಿ) ಸರ್ಕಾರಿ ಇಲಾಖೆಯಲ್ಲಿ / ರಾಜ್ಯ ಸರ್ಕಾರದ / ಕೇಂದ್ರ ಸರ್ಕಾರದ / ಸರ್ಕಾರದ ಯಾವುದೇ ಪ್ರಾಧಿಕಾರದಲ್ಲಿ / ರಾಜ್ಯ ಅಥವಾ ಕೇಂದ್ರ ಸರ್ಕಾರದ ಸಾರ್ವಜನಿಕ ಸ್ವಾಮ್ಯದ ಕಂಪನಿಗಳಲ್ಲಿ ಪ್ರಸ್ತುತ ಉದ್ಯೋಗಿಯಾಗಿದ್ದಲ್ಲಿ ಅಂತಹವರು ಇಲಾಖಾ ವತಿಯಿಂದ ಕರ್ತವ್ಯದಿಂದ ಬಿಡುಗಡೆ ಮಾಡುವ ಬಗ್ಗೆ ಇಚ್ಛಾ ಅನುಮತಿ ಪತ್ರ.

ಡಿ) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿ ಅಭ್ಯರ್ಥಿಗಳು ನಮೂನೆ–ಡಿ/ಇ/ಎಫ್ ನಲ್ಲಿ ತಹಶೀಲ್ದಾರ್‌ರಿಂದ ಪಡೆದ ಪ್ರಮಾಣ ಪತ್ರ.

ಇ) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿರಬೇಕು.

**ಟಿಪ್ಪಣಿ :** ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದ ನಂತರ ಮಾಡಿಸುವ ಮೀಸಲಾತಿ ಪ್ರಮಾಣ ಪತ್ರಗಳನ್ನು ಯಾವುದೇ ಹಂತದಲ್ಲಿ ಗಣನೆಗೆ ತೆಗೆದುಕೊಳ್ಳುವುದಿಲ್ಲ.

ಎಫ್) ಅಭ್ಯರ್ಥಿಯು ಅರ್ಜಿಯಲ್ಲಿ ಭರ್ತಿ ಮಾಡಿದ ಮಾಹಿತಿಯು ಅಂತಿಮವಾಗಿರುತ್ತದೆ. ಆದ್ದರಿಂದ ಅಭ್ಯರ್ಥಿಗಳು ಅರ್ಜಿಯನ್ನು ಭರ್ತಿ ಮಾಡುವಾಗ ಅರ್ಜಿಯ ಎಲ್ಲಾ ಕಾಲಂಗಳನ್ನು ಸರಿಯಾಗಿ ಭರ್ತಿ ಮಾಡತಕ್ಕದ್ದು.

ಜಿ) ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ವಿಳಾಸ ಬದಲಾವಣೆಯಾಗಿದ್ದಲ್ಲಿ ತಕ್ಷಣದಲ್ಲಿ ಅಭ್ಯರ್ಥಿಗಳು ಲಿಖಿತ ಮೂಲಕ ಸಂಬಂಧಪಟ್ಟ ಘಟಕಾಧಿಕಾರಿ (ಪೊಲೀಸ್ ಸೂಪರಿಂಟೆಂಡೆಂಟ್/ಪೊಲೀಸ್ ಕಮೀಷನರ್) ರವರ ನೇಮಕಾತಿ ಸಮಿತಿಯ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ನೇಮಕಾತಿ ಸಮಿತಿಯು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ನೇಮಕಾತಿ ಸಮಿತಿಯು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು.

ಹೆಚ್) ಅಭ್ಯರ್ಥಿಗಳು ಅರ್ಜಿಯನ್ನು ಭರ್ತಿ ಮಾಡುವಾಗ ಯಾವುದೇ ಸುಳ್ಳು/ ತಪ್ಪು ಮಾಹಿತಿಗಳನ್ನು ನೀಡಬಾರದು. ಹಾಗೇ ನೀಡಿ ತದನಂತರ ನೇಮಕಾತಿ ಸಮಿತಿಗೆ ಅದು ಪತ್ತೆಯಾದಲ್ಲಿ ಅಂತಹ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ರದ್ದು ಪಡಿಸಲಾಗುವುದು.

**13) ವಿಶೇಷ ಸೂಚನೆಗಳು :**

ಅಭ್ಯರ್ಥಿಗಳು ನೇಮಕಾತಿ ಸಮಿತಿಯು ನಿಗಧಿಪಡಿಸಿದ ಅರ್ಜಿ ನಮೂನೆಯಲ್ಲಿಯೇ ಎಲ್ಲಾ ಅಂಕಣಗಳನ್ನು ಸ್ಪಷ್ಟವಾಗಿ ಭರ್ತಿ ಮಾಡತಕ್ಕದ್ದು. ಇತರೆ ಯಾವುದೇ ನಮೂನೆಗಳಲ್ಲಿ ಸಲ್ಲಿಸುವ, ಶುಲ್ಕ ಪಾವತಿಸದೆ ಸಲ್ಲಿಸಲ್ಪಡುವ, ಅಪೂರ್ಣವಾಗಿರುವ, ಸಹಿ ಮಾಡದ ಹಾಗೂ ಭಾವಚಿತ್ರ ಇಲ್ಲದೆ ಇರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು ಹಾಗೂ ಈ ಕೆಳಕಂಡ ವಿಶೇಷ ಸೂಚನೆಗಳನ್ನು ಗಮನಿಸುವುದು.

ಎ) ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಅರ್ಜಿಯಲ್ಲಿನ ನಿಗದಿತ ಕಾಲಂನ್ನು ತುಂಬತಕ್ಕದ್ದು ಹಾಗೂ ಅವರ ಸೇವಾ ಪ್ರಮಾಣ ಪತ್ರ ಮತ್ತು ಸದರಿ ಹುದ್ದೆಗೆ ಅರ್ಜಿ ಸಲ್ಲಿಸುವ ಬಗ್ಗೆ ನಿರಾಕ್ಷೇಪಣ ಪ್ರಮಾಣ ಪತ್ರವನ್ನು (No Objection Certificate) ಸಂಬಂಧಿತ ಇಲಾಖಾ ಮುಖ್ಯಸ್ಥರಿಂದ ಪಡೆದು ಸಲ್ಲಿಸತಕ್ಕದ್ದು.

ಬಿ) ಒಂದು ವೇಳೆ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ/ಬಂದ್ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನದಂದು ಅರ್ಜಿಗಳನ್ನು ಸ್ವೀಕರಿಸಲಾಗುವುದು. ಆದರೆ ವಯೋಮಿತಿ ಹಾಗೂ ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆಯ ಪರಿಗಣನೆಗೆ ದಿನಾಂಕ: 5–7–2016 ಮಾತ್ರ ಅನ್ವಯವಾಗುತ್ತದೆ.

ಸಿ) ಅಭ್ಯರ್ಥಿಯು ಅರ್ಜಿಯನ್ನು ಸಮರ್ಪಕವಾಗಿ ತುಂಬದೇ ಸದರಿ ಅರ್ಜಿ ತಿರಸ್ಕೃತವಾದಲ್ಲಿ ತತ್ಸಂಬಂಧ ಯಾವುದೇ ರೀತಿಯ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

ಡಿ) ಕರ್ನಾಟಕ ರಾಜ್ಯದ, ಕೇಂದ್ರ ಸರ್ಕಾರದ ಯಾವುದೇ ಸರ್ಕಾರಿ ಹಾಗೂ ಅರೆ ಸರ್ಕಾರಿ ಸಂಸ್ಥೆಯ ಸೇವೆಯಿಂದ ವಜಾ ಗೊಂಡಿರುವ ನೌಕರರು ನೇಮಕಾತಿಗೆ ಅರ್ಹರಲ್ಲ.

ಇ) ಅಭ್ಯರ್ಥಿಯು ಹುದ್ದೆಗೆ ಅರ್ಜಿ ಸಲ್ಲಿಸಿದ ತಕ್ಷಣ ತಾನು ನಿಯಮ ಮತ್ತು ವಿನಿಯಮಗಳಿಗೆ (Rules & Regulations) ಬದ್ಧನಾಗಿರುತ್ತಾರೆ ಎಂದು ಭಾವಿಸಲಾಗಿರುತ್ತದೆ. ಒಂದು ವೇಳೆ ತಾನು ಸದರಿ ಹುದ್ದೆಗೆ ಆಯ್ಕೆಯಾಗದ ಪಕ್ಷದಲ್ಲಿ ತದನಂತರ ಅದೇ ನಿಯಮಗಳನ್ನು ಪ್ರಶ್ನಿಸಲು ಬರುವುದಿಲ್ಲ.

ಎಫ್) **ದುರ್ನಡತೆ** : ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆ ಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂದು, ತಪ್ಪಿತಸ್ಥನೆಂದು ಕಂಡುಬಂದಲ್ಲಿ ಹಾಗೂ ನೇಮಕಾತಿ ಸಮಿತಿಯಿಂದ ನೀಡಲಾದ ಯಾವುದೇ ಸೂಚನೆಗಳ್ನು ಉಲ್ಲಂಘಿಸುತ್ತಿರುವನೆಂದು ಅಥವಾ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡುಬಂದಲ್ಲಿ ಅಭ್ಯರ್ಥಿಯು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ; ನೇಮಕಾತಿ ಸಮಿತಿ ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂ ಆಗಿ ಡಿಬಾರ್ ಮಾಡಲಾಗುವುದು.

**ಪ್ರಾಂಶುಪಾಲರು,**
**ಪೊಲೀಸ್ ತರಬೇತಿ ಶಾಲೆ,**
**ಜ್ಯೋತಿನಗರ, ಮೈಸೂರು ನಗರ–5700 19**

**ಪೊಲೀಸ್ ತರಬೇತಿ ಶಾಲೆ, ಮೈಸೂರು ನಗರ**
**ಜ್ಯೋತಿನಗರ, ಮೈಸೂರು–570 019.**
**ದೂರವಾಣಿ ಸಂಖ್ಯೆ : 0821–2418732 ಇ–ಮೇಲ್ ವಿಳಾಸ : ptsmyc@ksp.gov.in**

ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ

ಅಭ್ಯರ್ಥಿಯು ಭಾವಚಿತ್ರದ ಮೇಲೆ ಸಹಿ ಮಾಡುವುದು.

## ಅನುಯಾಯಿ ಹುದ್ದೆಗಳ ನೇಮಕಾತಿ 2016 – ಅರ್ಜಿ ನಮೂನೆ

**ಅಧಿಸೂಚನೆ ಸಂಖ್ಯೆ: 22/ಪಿಟಿಎಸ್/2015–16, ದಿನಾಂಕ: 12–5–2016**

| ಕ್ರ. ಸಂ. | ಒದಗಿಸಬೇಕಾದ ಮಾಹಿತಿ | ಅಭ್ಯರ್ಥಿಯ ವಿವರ |
|---|---|---|
| 1. | ಅರ್ಜಿದಾರರ ಪೂರ್ಣ ಹೆಸರು | |
| 2. | ಲಿಂಗ (ಗಂಡು / ಹೆಣ್ಣು) | |
| 3. | ಜನ್ಮ ದಿನಾಂಕ<br>(ದೃಢೀಕೃತ ಪ್ರಮಾಣ ಪತ್ರದ ಪ್ರತಿ ಲಗತ್ತಿಸುವುದು) | |
| 4. | ವಿದ್ಯಾರ್ಹತೆ<br>(ದೃಢೀಕೃತ ಪ್ರಮಾಣ ಪತ್ರದ ಪ್ರತಿ ಲಗತ್ತಿಸುವುದು) | |
| 5. | ಮೊಬೈಲ್ ಸಂಖ್ಯೆ | |
| 6. | ತಾಯಿಯ ಹೆಸರು | |
| 7. | ತಂದೆಯ ಹೆಸರು | |
| 8. | ಪೂರ್ಣ ವಿಳಾಸ | |
| 9. | ಪಿನ್ ಕೋಡ್ ಸಂಖ್ಯೆ | |
| 10. | ಸ್ವಂತ ಜಿಲ್ಲೆ | |
| 11. | ಅನುಯಾಯಿ ಹುದ್ದೆಗೆ ನೇಮಕಾತಿ ಹೊಂದಲು ಇಚ್ಛಿಸಿರುವ ವೃತ್ತಿ (Trade) | |
| 12. | ಮೀಸಲಾತಿ ಕೋರುವ ಪ್ರವರ್ಗ<br>(ದೃಢೀಕೃತ ಪ್ರಮಾಣ ಪತ್ರದ ಪ್ರತಿ ಲಗತ್ತಿಸುವುದು) | |
| 13. | ಉಪ ಜಾತಿ | |
| 14. | ಗ್ರಾಮೀಣ ಅಭ್ಯರ್ಥಿಯೇ<br>(ದೃಢೀಕೃತ ಪ್ರಮಾಣ ಪತ್ರದ ಪ್ರತಿ ಲಗತ್ತಿಸುವುದು) | |
| 15. | ಮಹಿಳಾ ಅಭ್ಯರ್ಥಿಯೇ | |
| 16. | ಸರ್ಕಾರಿ ನೌಕರರೇ<br>(ಆಗಿದ್ದಲ್ಲಿ ವಿವರ ನೀಡುವುದು) | |
| 17. | ಮಾಜಿ ಸೈನಿಕ ಅಭ್ಯರ್ಥಿಯೇ? ವಿವರ/ದಾಖಲಾತಿ ನೀಡುವುದು. | |
| 18. | ಅಪರಾಧ ಪ್ರಕರಣದಲ್ಲಿ ಭಾಗಿಯಾಗಿದ್ದೀರಾ?/ ಅಪರಾಧ ಮೊಕದ್ದಮೆಯಲ್ಲಿ ಶಿಕ್ಷೆಗೆ ಒಳಪಟ್ಟಿರುವುವಿರಾ? | |
| 19. | ಬ್ಯಾಂಕ್ ಡಿ.ಡಿ.ಸಂಖ್ಯೆ, ದಿನಾಂಕ ಮತ್ತು ಪಾವತಿಸಿದ ಮೊತ್ತದ ವಿವರ | |

### ಘೋಷಣೆ

1. ಅರ್ಜಿಯಲ್ಲಿ ತಿಳಿಸಿರುವ ವಿವರಗಳು ನನಗೆ ತಿಳಿದ ಮಟ್ಟಿಗೆ ಮತ್ತು ನಾನು ನಂಬುವಷ್ಟರ ಮಟ್ಟಿಗೆ ನಿಜವೆಂದು, ಪೂರ್ಣವೆಂದು ಮತ್ತು ಸರಿಯಿದೆಯೆಂದು ಈ ಮೂಲಕ ಘೋಷಿಸುತ್ತೇನೆ. ನಾನು ನೀಡಲಾದ ಯಾವುದೇ ಮಾಹಿತಿಯು ಪರೀಕ್ಷೆ/ ನೇಮಕಾತಿ ಮುಂಚೆ, ನಡೆಯುವಾಗ ಅಥವಾ ತರುವಾಯ ಸುಳ್ಳು/ತಪ್ಪೆಂದು ಕಂಡುಬಂದ ಸಂದರ್ಭದಲ್ಲಿ ಅಥವಾ ಅನರ್ಹತೆ ಪತ್ತೆಯಾದ ಸಂದರ್ಭದಲ್ಲಿ ನೇಮಕಾತಿ ಸಮಿತಿಯು ನನ್ನ ವಿರುದ್ಧ ನಿಯಮಾನುಸಾರ ಕ್ರಮಕೈಗೊಳ್ಳಬಹುದೆಂದು ನನಗೆ ತಿಳಿದಿರುತ್ತದೆ.

2. ನಾನು ಅಧಿಸೂಚನೆಯಲ್ಲಿ ನಮೂದಿಸಿರುವ ನಿಯಮ ಮತ್ತು ವಿನಿಮಯಗಳನ್ನು ಹಾಗೂ ಎಲ್ಲಾ ಷರತ್ತುಗಳನ್ನು ಜಾಗರೂಕತೆಯಿಂದ ಓದಿರುತ್ತೇನೆ ಮತ್ತು ಅವುಗಳಿಗೆ ಬದ್ಧನಾಗಿದ್ದು, ಕಟ್ಟುನಿಟ್ಟಾಗಿ ಪಾಲಿಸುತ್ತೇನೆಂದು ಘೋಷಿಸುತ್ತೇನೆ. ನಾನು ಅರ್ಜಿ ಸಲ್ಲಿಸಿದ ಹುದ್ದೆಯ ನೇಮಕಾತಿ ನಿಗಧಿಪಡಿಸಿದ ವಯೋಮಿತಿ, ವಿದ್ಯಾರ್ಹತೆ ಮುಂತಾದ ಇತರೆ ಎಲ್ಲಾ ಅರ್ಹತಾ ಷರತ್ತುಗಳನ್ನು ಪೂರೈಸಿರುತ್ತೇನೆ. ನಾನು ಈ ಪ್ರಕ್ರಿಯೆಯಲ್ಲಿ ಹಾಜರಾಗಲು ಈ ಹಿಂದೆ ಉಚ್ಛಾಟಿಸಲ್ಪಟ್ಟಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

3. ನಾನು ಈ ಹುದ್ದೆಯ ಆಯ್ಕೆಯ ಸಲುವಾಗಿ ಅರ್ಜಿ ಸಲ್ಲಿಸುತ್ತಿರುವುದು ಈ ಹುದ್ದೆಯ ನಿಯಮ ಮತ್ತು ವಿನಿಮಯಗಳನ್ನು ಒಪ್ಪಿಕೊಂಡಂತೆ ಆಗಿರುತ್ತದೆಂದು ನನಗೆ ಸಂಪೂರ್ಣವಾಗಿ ತಿಳಿದಿರುತ್ತದೆ. ನೇಮಕಾತಿ ಪ್ರಕ್ರಿಯೆಯಲ್ಲಿ ಪಾಲ್ಗೊಂಡು ಆಯ್ಕೆಯಾಗದಿದ್ದಲ್ಲಿ, ಪಾಲ್ಗೊಂಡಿರುವ ಈ ನೇಮಕಾತಿ ನಿಯಮ ಮತ್ತು ವಿನಿಮಯಗಳನ್ನು ಪ್ರಶ್ನಿಸುವುದಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

**ದಿನಾಂಕ:** **ಅಭ್ಯರ್ಥಿಯ ಸಹಿ**

**P.R. 97**

**SC – 500**

## ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ರಾಮನಗರ

### ನೇಮಕಾತಿ ಪ್ರಕಟಣೆ

**ಅಧಿಸೂಚನೆ ಸಂಖ್ಯೆ: ಎಡಿಎಂ/01/2016, ರಾಮನಗರ, ದಿನಾಂಕ: 10.06.2016.**

**ವಿಷಯ :** ಹಿಂಬಾಕಿ ಉಳಿದ ಶೀಘ್ರಲಿಪಿಗಾರರ ಹುದ್ದೆಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ.

**ಉಲ್ಲೇಖ :** 1) ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರದ ಸಂಖ್ಯೆ: ಎಲ್‌ಸಿಎ–II 128/2012, (S/F), ದಿನಾಂಕ: 11.10.2013.

2) ಈ ಕಛೇರಿ ಅಧಿಸೂಚನೆ ಸಂಖ್ಯೆ: ಎಡಿಎಂ/17/2014, ದಿನಾಂಕ: 26.03.2014 ಮತ್ತು ಸಂಖ್ಯೆ: ಎಡಿಎಂ/17/2015, ದಿನಾಂಕ: 05.06.2015ರ ಅನ್ವಯ ಉಳಿದಿರುವ ಶೀಘ್ರಲಿಪಿಗಾರರು (ಬ್ಯಾಕ್‌ಲಾಗ್) ಹುದ್ದೆಯನ್ನು ಭರ್ತಿ ಮಾಡಿಕೊಳ್ಳುವ ಬಗ್ಗೆ.

ಮೇಲ್ಕಂಡ ಅಧಿಸೂಚನೆಯನ್ವಯ ರಾಮನಗರ ಜಿಲ್ಲಾ ನ್ಯಾಯಾಲಯ ಘಟಕದ ಅಧೀನ ನ್ಯಾಯಾಲಯಗಳಲ್ಲಿ ಹಿಂಬಾಕಿಯಿಂದ ಖಾಲಿ ಇರುವ ಶೀಘ್ರಲಿಪಿಗಾರರ ಹುದ್ದೆಗೆ ಅರ್ಹ ಅಭ್ಯರ್ಥಿಗಳಿಂದ **ಅರ್ಜಿಗಳನ್ನು ಆನ್‌ಲೈನ್ ಮೂಲಕ ಆಹ್ವಾನಿಸಲಾಗಿದೆ.**

**ಅರ್ಜಿಗಳನ್ನು ರಾಮನಗರ ಜಿಲ್ಲಾ ನ್ಯಾಯಾಲಯದ ವೆಬ್‌ಸೈಟ್**

**http://ecourts.gov.in/ramnagaram/online-recruitment**

**ಮೂಲಕ ಆನ್‌ಲೈನ್‌ನಲ್ಲಿ ದಿನಾಂಕ: 20.06.2016 ರಿಂದ 04.07.2016ರ ವರೆಗೆ ಮಾತ್ರ ಸಲ್ಲಿಸತಕ್ಕದ್ದು.**

**ಖಾಲಿ ಇರುವ ಹುದ್ದೆಗಳ ವಿವರಗಳು :**

**I. ಶೀಘ್ರಲಿಪಿಗಾರರ ಹುದ್ದೆ :**

1. ಹುದ್ದೆಗಳ ಸಂಖ್ಯೆ : 01

2. ವೇತನ ಶ್ರೇಣಿ : 14550–350–15600–400–17200–450–19000–500–21000–600–24600–700–26700 ಹಾಗೂ ಲಭ್ಯವಿರುವ ಇತರೆ ಭತ್ಯೆಗಳು.

3. ಹುದ್ದೆಗಳ ವರ್ಗೀಕರಣ :

| ವರ್ಗೀಕರಣ | ಇತರೆ | ಒಟ್ಟು |
|---|---|---|
| ಪ್ರವರ್ಗ–I (ಬ್ಯಾಕ್‌ಲಾಗ್) | 01 | **01** |
| **ಒಟ್ಟು** | **01** | **01** |

**4. ಶೈಕ್ಷಣಿಕ ವಿದ್ಯಾರ್ಹತೆ:**

ಎ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

ಬಿ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಹಿರಿಯ ದರ್ಜೆಯ (Senior Grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

ಸಿ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಹಿರಿಯ (Senior Grade) ದರ್ಜೆಯ ಕನ್ನಡ ಮತ್ತು ಆಂಗ್ಲ ಭಾಷೆಗಳ ಶೀಘ್ರಲಿಪಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಅಥವಾ ಡಿಪ್ಲೋಮೊ ಇನ್ ಸೆಕ್ರೆಟೇರಿಯಲ್/ ಕಮರ್ಷಿಯಲ್ ಪ್ರಾಕ್ಟೀಸ್‌ನಲ್ಲಿ ಕನ್ನಡ ಮತ್ತು ಆಂಗ್ಲ ಭಾಷೆಗಳ ಹಿರಿಯ ದರ್ಜೆ ಶೀಘ್ರಲಿಪಿ ಮತ್ತು ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು.

**ವಯೋಮಿತಿ (ಅರ್ಜಿ ಸಲ್ಲಿಸಲು ಕೊನೆಯ ದಿನಾಂಕಕ್ಕೆ ಅನುಗುಣವಾಗಿ) :**

ಕನಿಷ್ಠ ವಯೋಮಿತಿ : 18 ವರ್ಷ

ಗರಿಷ್ಠ ವಯೋಮಿತಿ : ಪ್ರವರ್ಗ–I – 40 ವರ್ಷ

ಸರ್ಕಾರಿ ಸೇವೆಯಲ್ಲಿರುವವರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು.

**ಆಯ್ಕೆ ವಿಧಾನ :**

ಕರ್ನಾಟಕ ಅಧೀನ ನ್ಯಾಯಾಲಯಗಳು (ಮಿನಿಸ್ಟೀರಿಯಲ್ ಮತ್ತು ಇತರೆ ಹುದ್ದೆಗಳು) (ನೇಮಕಾತಿ) (ತಿದ್ದುಪಡಿ) ನಿಯಮಗಳು 2007ರ ಅನ್ವಯ ನೇರ ನೇಮಕಾತಿಯ ಮೂಲಕ ಆಯ್ಕೆ ಮಾಡಲಾಗುವುದು.

**II. ಶೀಘ್ರಲಿಪಿಗಾರರ ಹುದ್ದೆಗೆ ಈ ಕೆಳಕಂಡ ಅರ್ಹತಾ ಪರೀಕ್ಷೆಯನ್ನು ನಡೆಸಲಾಗುವುದು.**

ಅ) ಒಂದು ನಿಮಿಷಕ್ಕೆ 120 ಶಬ್ದಗಳಂತೆ 5 ನಿಮಿಷಗಳ ಅವಧಿಯ ಉಕ್ತಲೇಖನ ಮತ್ತು ಅದನ್ನು ಲಿಪ್ಯಂತರ ಮಾಡಲು 45 ನಿಮಿಷಗಳ ಅವಧಿ. (ಗರಿಷ್ಠ 100 ಅಂಕಗಳ ಪರೀಕ್ಷೆಯಲ್ಲಿ ಕನಿಷ್ಠ 50 ಅಂಕಗಳನ್ನು ಪಡೆಯಬೇಕಾಗಿರುತ್ತದೆ).

ಆ) ಶೀಘ್ರಲಿಪಿಗಾರರ ಹುದ್ದೆಗೆ ಅವರು ಪಡೆದಿರುವ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಗಳು ಮತ್ತು ಅರ್ಹತಾ ಪರೀಕ್ಷೆಯ ಗರಿಷ್ಠ ಅಂಕಗಳ ಆಧಾರದ ಮೇಲೆ ಒಂದು ಹುದ್ದೆಗೆ ಐದು ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವುದು.

**ಟಿಪ್ಪಣಿ :** ಸಂದರ್ಶನವು 05 ಅಂಕಗಳನ್ನು ಒಳಗೊಂಡಿರುತ್ತದೆ.

**ಪರಿವೀಕ್ಷಣಾ ಅವಧಿ :**

ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ಸೇವಾ ನಿಯಮ (ಪರಿವೀಕ್ಷಣೆ ನಿಯಮಗಳು) 1977ರ ಪ್ರಕಾರ 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಅಭ್ಯರ್ಥಿಗಳು ಹುದ್ದೆಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಮತ್ತು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

**ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ :**

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಗಳನ್ನು ಸಲ್ಲಿಸುವ ಸಮಯದಲ್ಲಿ ಸಂಬಂಧಪಟ್ಟ ಪ್ರಾಧಿಕಾರದಿಂದ ನಿರಾಕ್ಷೇಪಣ ಪ್ರಮಾಣ ಪತ್ರವನ್ನು ಪಡೆದಿರಬೇಕು.

**ನಿಗದಿತ ಅರ್ಜಿ ಶುಲ್ಕ – ಪಾವತಿಸಬೇಕಾದ ಶುಲ್ಕ ಹಾಗೂ ವಿಧಾನ :**

| | |
|---|---|
| ಪ್ರವರ್ಗ–1 ಅಭ್ಯರ್ಥಿಗಳಿಗೆ | ರೂ.50/– |

ನಿಗದಿತ ಶುಲ್ಕವನ್ನು ನ್ಯಾಯಾಲಯದ ವೆಬ್‌ಸೈಟ್ http://ecourts.gov.in/ramnagaram/online-recruitment ನಲ್ಲಿ ನೀಡಲಾದ ಲಿಂಕ್ ಮುಖಾಂತರ ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್‌ನ State Bank Collect ಮೂಲಕ online payment through net banking / credit card / debit card / challan download ಸೌಲಭ್ಯದ ಮೂಲಕ ಪಾವತಿಸತಕ್ಕದ್ದು. ಶುಲ್ಕವನ್ನು ಆನ್‌ಲೈನ್ ಮೂಲಕ ಪಾವತಿ ಮಾಡಲು ಇಚ್ಛಿಸದ ಅಭ್ಯರ್ಥಿಗಳು ಚಲನ್ ಪ್ರತಿಯನ್ನು ಅಧಿಕೃತ ವೆಬ್‌ಸೈಟ್‌ನಿಂದ ಡೌನ್‌ಲೋಡ್ ಮಾಡಿಕೊಂಡು ಅದರ print out ಅನ್ನು ಪಡೆದುಕೊಂಡು ಎಸ್.ಬಿ.ಎಂ.ನ ಯಾವುದೇ ಶಾಖೆಗೆ ಹಾಜರುಪಡಿಸಿ ಶುಲ್ಕವನ್ನು ಪಾವತಿಸತಕ್ಕದ್ದು. ಇದನ್ನು ಹೊರತುಪಡಿಸಿ ಯಾವುದೇ ಡಿಮಾಂಡ್ ಡ್ರಾಫ್ಟ್ / ಪೋಸ್ಟಲ್ ಆರ್ಡರ್ / ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ. ಶುಲ್ಕ ಪಾವತಿಸದ ಅಭ್ಯರ್ಥಿಗಳ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**ಅಭ್ಯರ್ಥಿಗಳು ON-LINE ಮೂಲಕ ಅರ್ಜಿ ಭರ್ತಿ ಮಾಡುವ ಮೊದಲು ಕೆಳಕಂಡ ಸೂಚನೆಗಳನ್ನು ಕಡ್ಡಾಯವಾಗಿ ತಿಳಿದುಕೊಳ್ಳತಕ್ಕದ್ದು :**

1. ಅಭ್ಯರ್ಥಿಗಳು ಅರ್ಜಿಯನ್ನು ON-LINE ಮೂಲಕ ಸಲ್ಲಿಸುವ ಮೊದಲು ಕೊಟ್ಟಿರುವ ಎಲ್ಲಾ ಸೂಚನೆಗಳನ್ನು ಗಮನವಿಟ್ಟು ಓದಿಕೊಳ್ಳಬೇಕು ಮತ್ತು ತಪ್ಪಾಗದಂತೆ ನೋಡಿಕೊಳ್ಳುವುದು. ಸರಿಯಾದ ಮಾಹಿತಿ ನೀಡದೇ ಇರುವ ಮತ್ತು ಅಪೂರ್ಣ ಮಾಹಿತಿಯುಳ್ಳ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
2. ಅಭ್ಯರ್ಥಿಯು ಮೊಬೈಲ್ ಸಂಖ್ಯೆಯನ್ನು ಕಡ್ಡಾಯವಾಗಿ ನಮೂದಿಸುವುದು ಹಾಗೂ ಇ–ಮೇಲ್ ಐಡಿಯನ್ನು ಹೊಂದಿದ್ದಲ್ಲಿ ನಮೂದಿಸುವುದು. ಒಂದು ವೇಳೆ SMS ಅಥವಾ ಇ–ಮೇಲ್ ಮುಖಾಂತರ ತಮಗೆ ಸಂದೇಶ ತಲುಪದಿದ್ದಲ್ಲಿ ಈ ಪ್ರಾಧಿಕಾರ ಹೊಣೆಯಾಗಿರುವುದಿಲ್ಲ.
3. ಅಭ್ಯರ್ಥಿಯ ಭಾವಚಿತ್ರ ಮತ್ತು ಸಹಿಯನ್ನು ಸ್ಕ್ಯಾನ್ ಮಾಡಿ ಅಪ್‌ಲೋಡ್ ಮಾಡಲು ಈ ಕೆಳಕಂಡ ನಿರ್ದೇಶನಗಳನ್ನು ಪಾಲಿಸತಕ್ಕದ್ದು.
   ಅ) ಬಣ್ಣದ ಭಾವಚಿತ್ರವು ಇತ್ತೀಚಿನದಾಗಿದ್ದು, ಅಳತೆಯಲ್ಲಿ 5cm ಉದ್ದ x 3.6cm ಅಗಲವುಳ್ಳದ್ದಾಗಿರಬೇಕು ಮತ್ತು 50kb ಅಳತೆಯದ್ದಾಗಿರಬೇಕು ಹಾಗೂ ಅದು .jpg ನಮೂನೆಯಲ್ಲಿರಬೇಕು. ಭಾವಚಿತ್ರದ ಹಿಂಬದಿಯು ಬಿಳಿಬಣ್ಣದ್ದಾಗಿರಬೇಕು.
   ಆ) ಭಾವಚಿತ್ರವನ್ನು ಸ್ಕ್ಯಾನ್ ಮಾಡಿ ಅರ್ಜಿಗೆ ಅಪ್‌ಲೋಡ್ ಮಾಡಬೇಕು (ಯಾವುದೇ ಕಾರಣಕ್ಕೂ ಭಾವಚಿತ್ರದ ಮೇಲೆ ಸಹಿ ಮಾಡಬಾರದು).
   ಇ) ಅಭ್ಯರ್ಥಿಯು ಕಪ್ಪು ಬಾಲ್‌ಪಾಯಿಂಟ್ ಪೆನ್ನಿನಲ್ಲಿ ಬಿಳಿ ಹಾಳೆಯ ಮೇಲೆ ಸಹಿ ಮಾಡಿ (2.5cm ಉದ್ದ x 7.5cm ಅಗಲವುಳ್ಳದ್ದಾಗಿರಬೇಕು ಮತ್ತು 26kb ಅಳತೆಯದ್ದಾಗಿರಬೇಕು ಹಾಗೂ ಅದು .jpg ನಮೂನೆಯಲ್ಲಿರಬೇಕು) ಅಪ್‌ಲೋಡ್ ಮಾಡಬೇಕು.
4. ತದನಂತರ ಅಭ್ಯರ್ಥಿಯು ON-LINE ಅರ್ಜಿಯಲ್ಲಿ ಕೋರಲಾದ ಎಲ್ಲಾ ಮಾಹಿತಿಗಳನ್ನು ಭರ್ತಿ ಮಾಡಿ ನಿಗದಿತ ಶುಲ್ಕ ಪಾವತಿಸಲು ಅರ್ಜಿಯಲ್ಲಿ ತಿಳಿಸಿರುವಂತೆ ಕ್ರಮ ಕೈಗೊಳ್ಳುವುದು. ತದನಂತರ ಅರ್ಜಿಯನ್ನು ಹಾಗೂ ಶುಲ್ಕವನ್ನು ತುಂಬಿದ ಪ್ರತಿಯನ್ನು download ಮಾಡಿಕೊಂಡು ನೇಮಕಾತಿ ಪ್ರಕ್ರಿಯೆ ಮುಗಿಯುವವರೆಗೂ ತಮ್ಮ ಹತ್ತಿರ ಕಾಯ್ದಿರಿಸಿಕೊಳ್ಳತಕ್ಕದ್ದು ಹಾಗೂ ಅರ್ಹತಾ ಪರೀಕ್ಷೆಯ ಸಮಯದಲ್ಲಿ ಹಾಜರು ಪಡಿಸತಕ್ಕದ್ದು.
5. ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೇ, ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿ ಹಿಂತಿರುಗಿಸಲಾಗುವುದಿಲ್ಲ.
6. ನ್ಯಾಯಾಲಯದ ಅಧಿಕೃತ ವೆಬ್‌ಸೈಟ್ http://ecourts.gov.in/ramnagaram/online-recruitment ನಲ್ಲಿ ದಿನಾಂಕ: 04.07.2016ರ ವರೆಗೂ ಅರ್ಜಿಗಳನ್ನು ಸಲ್ಲಿಸಬಹುದಾಗಿದೆ.

   ಅರ್ಜಿಯನ್ನು ಆನ್‌ಲೈನ್ ಮೂಲಕ ನೋಂದಾಯಿಸಲು / ಸಲ್ಲಿಸಲು ದಿನಾಂಕ: 04.07.2016ರ ರಾತ್ರಿ 11.59ರ ವರೆಗೆ ಅವಕಾಶವಿರುತ್ತದೆ.

ಮತ್ತು

ಶುಲ್ಕವನ್ನು ಚಲನ್ ಮುಖಾಂತರ ಪಾವತಿಸಲು ದಿನಾಂಕ: 05.07.2016 ಕಡೆಯ ದಿನಾಂಕವಾಗಿದ್ದು, ಅದರೊಳಗೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಶಾಖೆಯ ವ್ಯವಹಾರದ ವೇಳೆಯಲ್ಲಿ ಪಾವತಿಸತಕ್ಕದ್ದು.

7. ಅರ್ಹ ಅಭ್ಯರ್ಥಿಗಳಿಗೆ SMS ಹಾಗೂ ಇ–ಮೇಲ್ ಮುಖಾಂತರ ಮಾಹಿತಿ ನೀಡಲಾಗುವುದು. ಸಂದರ್ಶನಕ್ಕೆ ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ನ್ಯಾಯಾಲಯದ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಸದರಿ ಪಟ್ಟಿಯ ಆಧಾರದ ಮೇಲೆ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವುದು.

8. ಅಭ್ಯರ್ಥಿಗಳು ತಮ್ಮ ಅರ್ಜಿಯ ಜೊತೆ ಈ ಕೆಳಕಂಡ ದಾಖಲೆಗಳನ್ನು ಹಾಜರುಪಡಿಸತಕ್ಕದ್ದು:–

   ಅ) ಹುದ್ದೆಗೆ ನಿಗದಿಪಡಿಸಿದ ಶುಲ್ಕವನ್ನು ಪಾವತಿಸಿದ ಚಲನ್ ಪ್ರತಿ.

   ಆ) ಎಸ್.ಎಸ್.ಎಲ್.ಸಿ. ಅಂಕಪಟ್ಟಿ.

   ಇ) ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ–ಇ ನಲ್ಲಿ ಸಂಬಂಧಿಸಿದ ತಹಶೀಲ್ದಾರರಿಂದ ಪಡೆದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳು.

   ಈ) ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ದಿನಾಂಕದಿಂದ 6 ತಿಂಗಳ ಒಳಗೆ ಪಡೆದ ಇಬ್ಬರು ಗೌರವಾನ್ವಿತ ವ್ಯಕ್ತಿಗಳು ನೀಡಿರುವ ನಡತೆ ಪ್ರಮಾಣ ಪತ್ರ ಹಾಗೂ ಶಾಲಾ ನಡತೆ ಪ್ರಮಾಣ ಪತ್ರಗಳು.

   ಉ) ನಿರಾಕ್ಷೇಪಣಾ ಪತ್ರ (ಸರಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳಿಗೆ).

9. ಮೇಲ್ಕಂಡ ದಾಖಲೆಗಳು ನಿಗದಿತ ನಮೂನೆಗಳಲ್ಲಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕಕ್ಕೆ ಮೊದಲು ಪಡೆದ ದಾಖಲೆಗಳಾಗಿರಬೇಕು ಹಾಗೂ ಸದರಿ ದಾಖಲೆಗಳ ಮೂಲ ದಾಖಲೆಗಳನ್ನು ಪರಿಶೀಲನೆ ಸಮಯದಲ್ಲಿ ಹಾಜರುಪಡಿಸಬೇಕು. ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಪಡೆದ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ

10. ಅಭ್ಯರ್ಥಿಯು ನಕಲಿ ಅಭ್ಯರ್ಥಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗೆ ನಡೆಸಲಾದ ಪರಿಶೀಲನೆ ಪ್ರಕ್ರಿಯೆಗಳ ಸಂದರ್ಭಗಳಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಅನುಸರಿಸಲು ಪ್ರಯತ್ನಿಸಿರುವನೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಭಿಸಿರುವನೆಂದು ಕಂಡುಬಂದಲ್ಲಿ ಅವನು/ಅವಳು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೇ, ಹುದ್ದೆಯ ಆಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**ಎನ್.ಸಿ. ಶ್ರೀನಿವಾಸ**
ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ರಾಮನಗರ

**P.R. 98**
**SC - 10**

## ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ರಾಮನಗರ

### ನೇಮಕಾತಿ ಪ್ರಕಟಣೆ

**ಅಧಿಸೂಚನೆ ಸಂಖ್ಯೆ: ಎಡಿಎಂ/09/2016, ರಾಮನಗರ, ದಿನಾಂಕ: 10.06.2016.**

**ವಿಷಯ :** ಹಿಂಬಾಕಿ ಉಳಿದ ಜವಾನರ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ.

**ಉಲ್ಲೇಖ :** 1) ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರದ ಸಂಖ್ಯೆ: ಎಲ್‌ಸಿಎ–II 128/2012, (S/F), ದಿನಾಂಕ: 11.10.2013.

2) ಈ ಕಛೇರಿ ಅಧಿಸೂಚನೆಗಳ ಸಂಖ್ಯೆ: ಎಡಿಎಂ/12/2010, ದಿನಾಂಕ: 09.04.2010 ಮತ್ತು ಸಂಖ್ಯೆ: ಎಡಿಎಂ/12/2013, ದಿನಾಂಕ: 27.02.2013ರ ಅನ್ವಯ ಉಳಿದಿರುವ ಜವಾನರು (ಬ್ಯಾಕ್‌ಲಾಗ್) ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು.

ಮೇಲ್ಕಂಡ ಅಧಿಸೂಚನೆಯನ್ವಯ ರಾಮನಗರ ಜಿಲ್ಲಾ ನ್ಯಾಯಾಲಯ ಘಟಕದ ಅಧೀನ ನ್ಯಾಯಾಲಯಗಳಲ್ಲಿ ಹಿಂಬಾಕಿಯಿಂದ ಖಾಲಿ ಇರುವ ಜವಾನರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ **ಅರ್ಜಿಗಳನ್ನು ಆನ್‌ಲೈನ್ ಮೂಲಕ ಆಹ್ವಾನಿಸಲಾಗಿದೆ.**

**ಅರ್ಜಿಗಳನ್ನು ರಾಮನಗರ ಜಿಲ್ಲಾ ನ್ಯಾಯಾಲಯದ ವೆಬ್‌ಸೈಟ್**

**http://ecourts.gov.in/ramnagaram/online-recruitment**

**ಮೂಲಕ ಆನ್‌ಲೈನ್‌ನಲ್ಲಿ ದಿನಾಂಕ: 20.06.2016 ರಿಂದ 04.07.2016ರ ವರೆಗೆ ಮಾತ್ರ ಸಲ್ಲಿಸತಕ್ಕದ್ದು.**

**ಖಾಲಿ ಇರುವ ಹುದ್ದೆಗಳ ವಿವರಗಳು :**

**I. ಜವಾನರ ಹುದ್ದೆ:**

1. ಹುದ್ದೆಗಳ ಸಂಖ್ಯೆ : 05
2. ವೇತನ ಶ್ರೇಣಿ – 9600–200–12000–250–13000–300–14200–350–14550 ಹಾಗೂ ಲಭ್ಯವಿರುವ ಇತರೆ ಭತ್ಯೆಗಳು.
3. ಹುದ್ದೆಗಳ ವರ್ಗೀಕರಣ:

| ವರ್ಗೀಕರಣ | ಇತರೆ | ಮಹಿಳಾ | ಮಾಜಿ ಸೈನಿಕ | ಒಟ್ಟು |
|---|---|---|---|---|
| ಸಾಮಾನ್ಯ ಅಭ್ಯರ್ಥಿ (ಬ್ಯಾಕ್‌ಲಾಗ್) | 01 | 01 | 01 | **03** |

| | | | | |
|---|---|---|---|---|
| ಪ್ರವರ್ಗ–III (ಎ) (ಬ್ಯಾಕ್‌ಲಾಗ್) | 01 | – | – | **01** |
| ಪ್ರವರ್ಗ–III (ಬಿ) (ಬ್ಯಾಕ್‌ಲಾಗ್) | 01 | – | – | **01** |
| **ಒಟ್ಟು** | **03** | **01** | **01** | **05** |

**4. ಶೈಕ್ಷಣಿಕ ವಿದ್ಯಾರ್ಹತೆ:**

ಎ) 7ನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು.

ಬಿ) ಅಭ್ಯರ್ಥಿಗೆ ಕನ್ನಡದಲ್ಲಿ ಓದಲು ಹಾಗೂ ಬರೆಯಲು ತಿಳಿದಿರಬೇಕು.

**ವಯೋಮಿತಿ (ಅರ್ಜಿ ಸಲ್ಲಿಸಲು ಕೊನೆಯ ದಿನಾಂಕಕ್ಕೆ ಅನುಗುಣವಾಗಿ) :**

ಕನಿಷ್ಠ ವಯೋಮಿತಿ : 18 ವರ್ಷ

ಗರಿಷ್ಠ ವಯೋಮಿತಿ : ಸಾಮಾನ್ಯ ವರ್ಗ – 35 ವರ್ಷ

2ಎ, 2ಬಿ, 3ಎ, 3ಬಿ – 38 ವರ್ಷ

ಪ.ಜಾ, ಪ.ಪಂ, ಪ್ರವರ್ಗ–1 – 40 ವರ್ಷ

ಸರ್ಕಾರಿ ಸೇವೆಯಲ್ಲಿರುವವರಿಗೆ ಹಾಗೂ ಮಾಜಿ ಸೈನಿಕರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು.

**ಆಯ್ಕೆ ವಿಧಾನ :**

ಕರ್ನಾಟಕ ಅಧೀನ ನ್ಯಾಯಾಲಯಗಳು (ಮಿನಿಸ್ಟೀರಿಯಲ್ ಮತ್ತು ಇತರೆ ಹುದ್ದೆಗಳು) (ನೇಮಕಾತಿ) (ತಿದ್ದುಪಡಿ) ನಿಯಮಗಳು 2007ರ ಅನ್ವಯ ನೇರ ನೇಮಕಾತಿಯ ಮೂಲಕ ಆಯ್ಕೆ ಮಾಡಲಾಗುವುದು.

ಮಹಿಳಾ ಅಭ್ಯರ್ಥಿಗಳು ಹಾಗೂ ಮಾಜಿ ಸೈನಿಕ ಅಭ್ಯರ್ಥಿಗಳು ಅರ್ಹ ಅಭ್ಯರ್ಥಿಗಳು ಲಭ್ಯವಿರದೇ ಇದ್ದ ಪಕ್ಷದಲ್ಲಿ ಆ ಹುದ್ದೆಗಳನ್ನು ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

**II. ಜವಾನರ ಹುದ್ದೆಗೆ :**

ಅ) ಜವಾನರ ಹುದ್ದೆಗೆ 7ನೇ ತರಗತಿಯಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳ ಆಧಾರದ ಮೇಲೆ ಒಂದು ಹುದ್ದೆಗೆ 10 ಅಭ್ಯರ್ಥಿಗಳಂತೆ (1:10ರ ಅನುಪಾತದಲ್ಲಿ) ಅತಿ ಹೆಚ್ಚು ಅಂಕ ಪಡೆದ ಅಭ್ಯರ್ಥಿಗಳನ್ನು ಪ್ರಕಟಿಸಿರುವ ಹುದ್ದೆಗಳಿಗೆ ಅನುಗುಣವಾಗಿ ಸಂದರ್ಶನಕ್ಕೆ ಕರೆಯಲಾಗುವುದು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿ** : ಸಂದರ್ಶನವು 10 ಅಂಕಗಳನ್ನು ಒಳಗೊಂಡಿರುತ್ತದೆ.

**ಪರಿವೀಕ್ಷಣಾ ಅವಧಿ :**

ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ಸೇವಾ ನಿಯಮ (ಪರಿವೀಕ್ಷಣೆ ನಿಯಮಗಳು) 1977ರ ಪ್ರಕಾರ 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಅಭ್ಯರ್ಥಿಗಳು ಹುದ್ದೆಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಮತ್ತು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

**ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ :**

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಗಳನ್ನು ಸಲ್ಲಿಸುವ ಸಮಯದಲ್ಲಿ ಸಂಬಂಧಪಟ್ಟ ಪ್ರಾಧಿಕಾರದಿಂದ ನಿರಾಕ್ಷೇಪಣ ಪ್ರಮಾಣ ಪತ್ರವನ್ನು ಪಡೆದಿರಬೇಕು.

**ನಿಗದಿತ ಅರ್ಜಿ ಶುಲ್ಕ – ಪಾವತಿಸಬೇಕಾದ ಶುಲ್ಕ ಹಾಗೂ ವಿಧಾನ :**

| | |
|---|---|
| ಸಾಮಾನ್ಯ ವರ್ಗ, ಪ್ರವರ್ಗ–2ಎ, 2ಬಿ, 3ಎ ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳಿಗೆ. | ರೂ.100/– |
| ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ, ಪ್ರವರ್ಗ–1 ಹಾಗೂ ಅಂಗವಿಕಲ ಅಭ್ಯರ್ಥಿಗಳಿಗೆ | ರೂ.50/– |

ನಿಗದಿತ ಶುಲ್ಕವನ್ನು ನ್ಯಾಯಾಲಯದ ವೆಬ್‌ಸೈಟ್ http://ecourts.gov.in/ramnagaram/online-recruitment ನಲ್ಲಿ ನೀಡಲಾದ ಲಿಂಕ್ ಮುಖಾಂತರ ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್‌ನ State Bank Collect ಮೂಲಕ online payment through net banking / credit card / debit card / challan download ಸೌಲಭ್ಯದ ಮೂಲಕ ಪಾವತಿಸತಕ್ಕದ್ದು. ಶುಲ್ಕವನ್ನು ಆನ್‌ಲೈನ್ ಮೂಲಕ ಪಾವತಿ ಮಾಡಲು ಇಚ್ಛಿಸದ ಅಭ್ಯರ್ಥಿಗಳು ಚಲನ್ ಪ್ರತಿಯನ್ನು ಅಧಿಕೃತ ವೆಬ್‌ಸೈಟ್‌ನಿಂದ ಡೌನ್‌ಲೋಡ್ ಮಾಡಿಕೊಂಡು ಅದರ print out ಅನ್ನು ಪಡೆದುಕೊಂಡು ಎಸ್.ಬಿ.ಎಂ.ನ ಯಾವುದೇ ಶಾಖೆಗೆ ಹಾಜರುಪಡಿಸಿ ಶುಲ್ಕವನ್ನು ಪಾವತಿಸತಕ್ಕದ್ದು. ಇದನ್ನು ಹೊರತುಪಡಿಸಿ ಯಾವುದೇ ಡಿಮಾಂಡ್ ಡ್ರಾಫ್ಟ್ / ಪೋಸ್ಟಲ್ ಆರ್ಡರ್ / ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ. ಶುಲ್ಕ ಪಾವತಿಸದ ಅಭ್ಯರ್ಥಿಗಳ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**ಅಭ್ಯರ್ಥಿಗಳು ON-LINE ಮೂಲಕ ಅರ್ಜಿ ಭರ್ತಿ ಮಾಡುವ ಮೊದಲು ಕೆಳಕಂಡ ಸೂಚನೆಗಳನ್ನು ಕಡ್ಡಾಯವಾಗಿ ತಿಳಿದುಕೊಳ್ಳತಕ್ಕದ್ದು :**

1. ಅಭ್ಯರ್ಥಿಗಳು ಅರ್ಜಿಯನ್ನು ON-LINE ಮೂಲಕ ಸಲ್ಲಿಸುವ ಮೊದಲು ಕೊಟ್ಟಿರುವ ಎಲ್ಲಾ ಸೂಚನೆಗಳನ್ನು ಗಮನವಿಟ್ಟು ಓದಿಕೊಳ್ಳಬೇಕು ಮತ್ತು ತಪ್ಪಾಗದಂತೆ ನೋಡಿಕೊಳ್ಳುವುದು. ಸರಿಯಾದ ಮಾಹಿತಿ ನೀಡದೇ ಇರುವ ಮತ್ತು ಅಪೂರ್ಣ ಮಾಹಿತಿಯುಳ್ಳ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

2. ಅಭ್ಯರ್ಥಿಯು ಮೊಬೈಲ್ ಸಂಖ್ಯೆಯನ್ನು ಕಡ್ಡಾಯವಾಗಿ ನಮೂದಿಸುವುದು ಹಾಗೂ ಇ–ಮೇಲ್ ಐಡಿಯನ್ನು ಹೊಂದಿದ್ದಲ್ಲಿ ನಮೂದಿಸುವುದು. ಒಂದು ವೇಳೆ SMS ಅಥವಾ ಇ–ಮೇಲ್ ಮುಖಾಂತರ ತಮಗೆ ಸಂದೇಶ ತಲುಪದಿದ್ದಲ್ಲಿ ಈ ಪ್ರಾಧಿಕಾರ ಹೊಣೆಯಾಗಿರುವುದಿಲ್ಲ.

3. ಅಭ್ಯರ್ಥಿಯ ಭಾವಚಿತ್ರ ಮತ್ತು ಸಹಿಯನ್ನು ಸ್ಕ್ಯಾನ್ ಮಾಡಿ ಅಪ್‌ಲೋಡ್ ಮಾಡಲು ಈ ಕೆಳಕಂಡ ನಿರ್ದೇಶನಗಳನ್ನು ಪಾಲಿಸತಕ್ಕದ್ದು.

   ಅ) ಬಣ್ಣದ ಭಾವಚಿತ್ರವು ಇತ್ತೀಚಿನದಾಗಿದ್ದು, ಅಳತೆಯಲ್ಲಿ 5cm ಉದ್ದ x 3.6cm ಅಗಲವುಳ್ಳದ್ದಾಗಿರಬೇಕು ಮತ್ತು 50kb ಅಳತೆಯದ್ದಾಗಿರಬೇಕು ಹಾಗೂ ಅದು .jpg ನಮೂನೆಯಲ್ಲಿರಬೇಕು. ಭಾವಚಿತ್ರದ ಹಿಂಬದಿಯು ಬಿಳಿಬಣ್ಣದ್ದಾಗಿರಬೇಕು.

   ಆ) ಭಾವಚಿತ್ರವನ್ನು ಸ್ಕ್ಯಾನ್ ಮಾಡಿ ಅರ್ಜಿಗೆ ಅಪ್‌ಲೋಡ್ ಮಾಡಬೇಕು (ಯಾವುದೇ ಕಾರಣಕ್ಕೂ ಭಾವಚಿತ್ರದ ಮೇಲೆ ಸಹಿ ಮಾಡಬಾರದು).

   ಇ) ಅಭ್ಯರ್ಥಿಯು ಕಪ್ಪು ಬಾಲ್‌ಪಾಯಿಂಟ್ ಪೆನ್ನಿನಲ್ಲಿ ಬಿಳಿ ಹಾಳೆಯ ಮೇಲೆ ಸಹಿ ಮಾಡಿ (2.5cm ಉದ್ದ x 7.5cm ಅಗಲವುಳ್ಳದ್ದಾಗಿರಬೇಕು ಮತ್ತು 26kb ಅಳತೆಯದ್ದಾಗಿರಬೇಕು ಹಾಗೂ ಅದು .jpg ನಮೂನೆಯಲ್ಲಿರಬೇಕು) ಅಪ್‌ಲೋಡ್ ಮಾಡಬೇಕು.

4. ತದನಂತರ ಅಭ್ಯರ್ಥಿಯು ON-LINE ಅರ್ಜಿಯಲ್ಲಿ ಕೋರಲಾದ ಎಲ್ಲಾ ಮಾಹಿತಿಗಳನ್ನು ಭರ್ತಿ ಮಾಡಿ ನಿಗದಿತ ಶುಲ್ಕ ಪಾವತಿಸಲು ಅರ್ಜಿಯಲ್ಲಿ ತಿಳಿಸಿರುವಂತೆ ಕ್ರಮ ಕೈಗೊಳ್ಳುವುದು. ತದನಂತರ ಅರ್ಜಿಯನ್ನು ಹಾಗೂ ಶುಲ್ಕವನ್ನು ತುಂಬಿದ ಪ್ರತಿಯನ್ನು download ಮಾಡಿಕೊಂಡು ನೇಮಕಾತಿ ಪ್ರಕ್ರಿಯೆ ಮುಗಿಯುವವರೆಗೂ ತಮ್ಮ ಹತ್ತಿರ ಕಾಯ್ದಿರಿಸಿಕೊಳ್ಳತಕ್ಕದ್ದು ಹಾಗೂ ಅರ್ಹತಾ ಪರೀಕ್ಷೆಯ ಸಮಯದಲ್ಲಿ ಹಾಜರು ಪಡಿಸತಕ್ಕದ್ದು.

5. ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೇ, ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿ ಹಿಂತಿರುಗಿಸಲಾಗುವುದಿಲ್ಲ.

6. ನ್ಯಾಯಾಲಯದ ಅಧಿಕೃತ ವೆಬ್‌ಸೈಟ್ http://ecourts.gov.in/ramnagaram/online-recruitment ನಲ್ಲಿ ದಿನಾಂಕ: 04.07.2016ರ ವರೆಗೂ ಅರ್ಜಿಗಳನ್ನು ಸಲ್ಲಿಸಬಹುದಾಗಿದೆ.

   **ಅರ್ಜಿಯನ್ನು ಆನ್‌ಲೈನ್ ಮೂಲಕ ನೋಂದಾಯಿಸಲು / ಸಲ್ಲಿಸಲು ದಿನಾಂಕ: 04.07.2016ರ ರಾತ್ರಿ 11.59ರ ವರೆಗೆ ಅವಕಾಶವಿರುತ್ತದೆ.**

   ಮತ್ತು

   ಶುಲ್ಕವನ್ನು ಚಲನ್ ಮುಖಾಂತರ ಪಾವತಿಸಲು ದಿನಾಂಕ: 05.07.2016 ಕಡೆಯ ದಿನಾಂಕವಾಗಿದ್ದು, ಅದರೊಳಗೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಶಾಖೆಯ ವ್ಯವಹಾರದ ವೇಳೆಯಲ್ಲಿ ಪಾವತಿಸತಕ್ಕದ್ದು.

7. ಅರ್ಹ ಅಭ್ಯರ್ಥಿಗಳಿಗೆ SMS ಹಾಗೂ ಇ–ಮೇಲ್ ಮುಖಾಂತರ ಮಾಹಿತಿ ನೀಡಲಾಗುವುದು. ಸಂದರ್ಶನಕ್ಕೆ ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ನ್ಯಾಯಾಲಯದ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಸದರಿ ಪಟ್ಟಿಯ ಆಧಾರದ ಮೇಲೆ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವುದು.

8. ಅಭ್ಯರ್ಥಿಗಳು ತಮ್ಮ ಅರ್ಜಿಯ ಜೊತೆ ಈ ಕೆಳಕಂಡ ದಾಖಲೆಗಳನ್ನು ಹಾಜರುಪಡಿಸತಕ್ಕದ್ದು:–

   ಅ) ಹುದ್ದೆಗೆ ನಿಗದಿಪಡಿಸಿದ ಶುಲ್ಕವನ್ನು ಪಾವತಿಸಿದ ಚಲನ್ ಪ್ರತಿ.

   ಆ) ಅರ್ಜಿ ಸಲ್ಲಿಸಲು ಬಯಸುವ ಅಭ್ಯರ್ಥಿಗಳು 7ನೇ ತರಗತಿಯ ಅಂಕಪಟ್ಟಿಯನ್ನು ಮತ್ತು ಅವರ ಜನ್ಮ ದಿನಾಂಕ ತೋರಿಸುವ ಸೂಕ್ತ ಮತ್ತು ಕ್ರಮಬದ್ಧವಾದ ದಾಖಲೆಗಳನ್ನು ಹಾಜರುಪಡಿಸುವುದು.

   ಇ) ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಮೂನೆ–ಡಿ ನಲ್ಲಿ, ಪ್ರವರ್ಗ–Iರ ಅಭ್ಯರ್ಥಿಗಳು ನಮೂನೆ–ಇ ನಲ್ಲಿ ಮತ್ತು 2ಎ, 2ಬಿ, 3ಎ ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು ನಮೂನೆ–ಎಫ್ ನಲ್ಲಿ ಸಂಬಂಧಿಸಿದ ತಹಶೀಲ್ದಾರರಿಂದ ಪಡೆದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳು.

   ಈ) ಮಾಜಿ ಸೈನಿಕ ಅಭ್ಯರ್ಥಿಗಳು ಇತರೇ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಹಾಗೂ ವಯೋಮಿತಿ ರಿಯಾಯಿತಿ ಕೋರಲು ಸೈನಿಕ ಸೇವೆಯಿಂದ ಬಿಡುಗಡೆಯಾದ/ವಿಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ.

   ಉ) ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ದಿನಾಂಕದಿಂದ 6 ತಿಂಗಳ ಒಳಗೆ ಪಡೆದ ಇಬ್ಬರು ಗೌರವಾನ್ವಿತ ವ್ಯಕ್ತಿಗಳು ನೀಡಿರುವ ನಡತೆ ಪ್ರಮಾಣ ಪತ್ರ ಹಾಗೂ ಶಾಲಾ ನಡತೆ ಪ್ರಮಾಣ ಪತ್ರಗಳು.

   ಊ) ನಿರಾಕ್ಷೇಪಣಾ ಪತ್ರ (ಸರಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳಿಗೆ).

9. ಮೇಲ್ಕಂಡ ದಾಖಲೆಗಳು ನಿಗದಿತ ನಮೂನೆಗಳಲ್ಲಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕಕ್ಕೆ ಮೊದಲು ಪಡೆದ ದಾಖಲೆಗಳಾಗಿರಬೇಕು ಹಾಗೂ ಸದರಿ ದಾಖಲೆಗಳ ಮೂಲ ದಾಖಲೆಗಳನ್ನು ಪರಿಶೀಲನೆ ಸಮಯದಲ್ಲಿ ಹಾಜರುಪಡಿಸಬೇಕು. ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಪಡೆದ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.

10. ಅಭ್ಯರ್ಥಿಯು ನಕಲಿ ಅಭ್ಯರ್ಥಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗೆ ನಡೆಸಲಾದ ಪರಿಶೀಲನೆ ಪ್ರಕ್ರಿಯೆಗಳ ಸಂದರ್ಭಗಳಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಅನುಸರಿಸಲು ಪ್ರಯತ್ನಿಸಿರುವನೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಭಿಸಿರುವನೆಂದು ಕಂಡುಬಂದಲ್ಲಿ ಅವನು/ಅವಳು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೇ, ಹುದ್ದೆಯ ಆಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**ಎನ್.ಸಿ. ಶ್ರೀನಿವಾಸ**

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,

ರಾಮನಗರ.

**P.R. 99**

**SC - 10**

## ಅಲ್ಪಸಂಖ್ಯಾತರ ನಿರ್ದೇಶನಾಲಯ

**20ನೇ ಮಹಡಿ, ವಿ.ವಿ. ದೊಡ್ಡಗೋಪುರ, ಡಾ॥ ಬಿ.ಆರ್. ಅಂಬೇಡ್ಕರ್ ವೀದಿ, ಬೆಂಗಳೂರು–01.**

**ಅಧಿಕೃತ ಜ್ಞಾಪನ**

**ಸಂಖ್ಯೆ:ಅಸಂನಿ/ಸಿಆರ್–ನೇಮಕಾತಿ/01/2016–17, ದಿನಾಂಕ : 16.05.2016.**

**ವಿಷಯ :** ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯದಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ನೇಮಕಗೊಂಡ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ **ಪ್ರಾಂಶುಪಾಲರ** ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗೆ ನೇಮಕಾತಿ ಆದೇಶ ನೀಡುವ ಬಗ್ಗೆ.

**ಉಲ್ಲೇಖ :**
1. ಕರ್ನಾಟಕ ಲೋಕಸೇವಾ ಆಯೋಗದ ಪ್ರಕಟಣೆ ಸಂಖ್ಯೆ: ಪಿಎಸ್‌ಸಿ 1 ಆರ್.ಟಿ.(4) ಬಿ–1/2014, ದಿನಾಂಕ: 25.09.2014.
2. ಕರ್ನಾಟಕ ಲೋಕಸೇವಾ ಆಯೋಗದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಪ್ರಾಂಶುಪಾಲರ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ನೇಮಕಾತಿ ಅಧಿಸೂಚನೆ ಸಂಖ್ಯೆ: ಪಿ.ಎಸ್.ಸಿ.06 ಆರ್.ಟಿ.ಬಿ. 2014 ದಿನಾಂಕ: 06.01.2016.
3. ಕರ್ನಾಟಕ ಲೋಕಸೇವಾ ಆಯೋಗದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವಿವಿಧ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪರಿಶೀಲಿಸಿ ಸಿಂಧುತ್ವ ಪ್ರಮಾಣ ಪತ್ರ ನೀಡುವ ಬಗ್ಗೆ ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಬರೆದ ಪತ್ರ ಸಂಖ್ಯೆ: ಅಂ.ಸ.ನಿ/ಕೆ.ಪಿ.ಎಸ್.ಸಿ/ನೇ/ಸಿಆರ್– /2015–16, ದಿನಾಂಕ: 02.02.2016.
4. ಕರ್ನಾಟಕ ಲೋಕಸೇವಾ ಆಯೋಗದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವಿವಿಧ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ವೈದ್ಯಕೀಯ ಪರೀಕ್ಷೆಗೆ ಒಳಪಡಿಸುವ ಬಗ್ಗೆ ಎಲ್ಲಾ ಜಿಲ್ಲೆಗಳ ಜಿಲ್ಲಾ ಶಸ್ತ್ರಚಿಕಿತ್ಸಕರಿಗೆ ಬರೆದ ಪತ್ರ ಸಂಖ್ಯೆ: ಅಂ.ಸ.ನಿ/ಕೆ.ಪಿ.ಎಸ್.ಸಿ/ನೇ/ಸಿಆರ್–/2015–16, ದಿನಾಂಕ: 04.02.2016.
5. ಕರ್ನಾಟಕ ಲೋಕಸೇವಾ ಆಯೋಗದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವಿವಿಧ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ಗುಣ ಮತ್ತು ನಡತೆ ಪರಿಶೀಲಿಸಿ ವರದಿ ನೀಡುವ ಬಗ್ಗೆ ಎಲ್ಲಾ ಜಿಲ್ಲೆಗಳ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳಿಗೆ ಬರೆದ ಪತ್ರ ಸಂಖ್ಯೆ: ಅಂ.ಸ.ನಿ/ಕೆ.ಪಿ.ಎಸ್.ಸಿ/ನೇ/ಸಿಆರ್–/2015–16, ದಿನಾಂಕ: 04.02.2016.

ಅಲ್ಪಸಂಖ್ಯಾತರ ನಿರ್ದೇಶನಾಲಯದಲ್ಲಿನ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಪ್ರಾಂಶುಪಾಲರ ಹುದ್ದೆಗಳಿಗೆ ನೇಮಕಾತಿ ಕುರಿತಂತೆ ಉಲ್ಲೇಖ (1) ರಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಮುಖಾಂತರ ಪ್ರಕಟಣೆ ಹೊರಡಿಸಲಾಗಿತ್ತು.

ಮುಂದುವರೆಯುತ್ತಾ, ನೇಮಕಾತಿಯ ಎಲ್ಲಾ ಹಂತದ ಪ್ರಕ್ರಿಯೆಗಳನ್ನು ಪೂರ್ಣಗೊಳಿಸಿ ಉಲ್ಲೇಖ (2) ರಂತೆ ಅಂತಿಮ ಅಧಿಸೂಚನೆ ಹೊರಡಿಸಲಾಗಿದ್ದು, ಉಲ್ಲೇಖಿತ ಪತ್ರಗಳು 3,4 ಹಾಗೂ 5 ರಂತೆ ನೇಮಕಾತಿ ಹೊಂದಿದ ಅಭ್ಯರ್ಥಿಗಳ ಸಿಂಧುತ್ವ ಪ್ರಮಾಣ ಪತ್ರ, ವೈದ್ಯಕೀಯ ಪ್ರಮಾಣ ಪತ್ರ ಹಾಗೂ ಗುಣ ಮತ್ತು ನಡತೆಯ ಪ್ರಮಾಣ ಪತ್ರಗಳಿಗಾಗಿ ಸಂಬಂಧಿತ ಪ್ರಾಧಿಕಾರಗಳಿಗೆ ಪತ್ರಗಳನ್ನು ಬರೆದು, ಎಲ್ಲಾ ಸಂಬಂದಪಟ್ಟ ಪ್ರಮಾಣಪತ್ರಗಳನ್ನು ಪಡೆಯಲಾಗಿರುತ್ತದೆ. ಆಯ್ಕೆಯಾದ ಅಭ್ಯರ್ಥಿಯ ಮೆರಿಟ್ ಹಾಗೂ ವರ್ಗವಾರು ಆಧಾರದ ಮೇಲೆ ಕೌನ್ಸಿಲಿಂಗ್ ಮೂಲಕ ಈ ಕೆಳಕಂಡ ಅಭ್ಯರ್ಥಿಯನ್ನು ಈ ಮುಂದೆ ಸೂಚಿಸಲಾಗಿರುವ ಸ್ಥಳಕ್ಕೆ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ **ಪ್ರಾಂಶುಪಾಲ ಗ್ರೂಪ್ 'ಬಿ' ಹುದ್ದೆಗಳಿಗೆ ರೂ.22800–43200** ವೇತನಶ್ರೇಣಿಯಲ್ಲಿ ಈ ಕೆಳಕಂಡ ಷರತ್ತುಗೊಳಪಡಿಸಿ, ನೇಮಕಾತಿ ಮಾಡಿ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

| SL NO. | NAME OF THE CANDIDATE | REG.NO. / D O B / RESVN. / QUALIFICATION | School and Place of Appointment and Posting |
|---|---|---|---|
| 1 | VIJAYAKUMAR B K<br>S/O VEERABHADRAPPA B K<br>BEHIND VETERNARY HOSPITAL 2ND CROSS, SHIRALAKOPPA SHIKARIPURA TQ, Shivamogga -577428 | 515170<br>28/05/88<br>GM/3B/KMS<br>MSc B.Ed | Morarji Desai Residential School<br>**Kerebilachi**<br>Channagiri Taluk<br>Davanagere Dist |

**ಈ ನೇಮಕಾತಿಯು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ**

1. ಸದರಿ ನೇಮಕಾತಿಯು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಾವಳಿಗಳು 1977 ರನ್ವಯ 2 ವರ್ಷಗಳ ಖಾಯಂಪೂರ್ವ ಪರೀಕ್ಷಾರ್ಥ ಸೇವಾ ಅವಧಿ ಒಳಪಟ್ಟಿರುತ್ತದೆ. ಖಾಯಂ ಪೂರ್ವ ಅವಧಿಯನ್ನು ತೃಪ್ತಿಕರವಾಗಿ ಪೂರ್ಣಗೊಳಿಸತಕ್ಕದ್ದು.

2. ಸದರಿ ಅಭ್ಯರ್ಥಿಯ ನೇಮಕಾತಿಯು ಮತ್ತು ಸೇವಾ ಸೌಲಭ್ಯಗಳು ಆಗಿಂದಾಗ್ಗೆ ಜಾರಿಯಲ್ಲಿರುವ ಸರ್ಕಾರದ ನಿಯಮಗಳು/ಆದೇಶಗಳ ಅಧೀನಕ್ಕೊಳಪಟ್ಟಿರುತ್ತದೆ.
3. **ಈ ನೇಮಕಾತಿಯ ಆದೇಶ ಪಡೆದ ದಿನಾಂಕದಿಂದ 15 ದಿನಗೊಳಗಾಗಿ ಅಭ್ಯರ್ಥಿಗಳು ನೇಮಕಗೊಂಡ ಸ್ಥಳಕ್ಕೆ ತಪ್ಪದೇ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.** ನಿಗಧಿತ ದಿನಾಂಕದೊಳಗಾಗಿ ಕರ್ತವ್ಯಕ್ಕೆ ಹಾಜರಾಗದಿದ್ದಲ್ಲಿ ನೇಮಕಾತಿಯ ಆದೇಶವನ್ನು ಯಾವುದೇ ಮುನ್ಸೂಚನೆ ಇಲ್ಲದೇ ರದ್ದುಗೊಳಿಸಲಾಗುವುದು.
4. ಅಭ್ಯರ್ಥಿಯು ಹುದ್ದೆಗೆ ನಿಗಧಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳನ್ನು ಕರ್ನಾಟಕ ನಾಗರಿಕ ಸೇವಾ (ಕನ್ನಡ ಭಾಷಾ ಪರೀಕ್ಷೆ) 1974 ರನ್ವಯ ಪಾಸು ಮಾಡತಕ್ಕದ್ದು.
5. ಸದರಿ ಅಭ್ಯರ್ಥಿಗೆ ನೇಮಕಾತಿ ಮಾಡಿದ ಸ್ಥಳ ಸೇರಲು ಯಾವುದೇ ಪ್ರಯಾಣ ಭತ್ಯೆ ಮತ್ತು ದಿನಭತ್ಯೆ ನೀಡಲಾಗುವುದಿಲ್ಲ.
6. ಅಭ್ಯರ್ಥಿಯು ಸೇವೆಗೆ ಹಾಜರಾಗುವ ಪೂರ್ವದಲ್ಲಿ, ಅಭ್ಯರ್ಥಿಗೆ ಹಾಗೂ ಅಭ್ಯರ್ಥಿಯ ಕುಟುಂಬಕ್ಕೆ ಸಂಬಂಧಿಸಿದಂತೆ ಸ್ಥಿರ ಮತ್ತು ಚರಾಸ್ಥಿಗಳ ವಿವರ, ಸಾಲಗಳ ಪ್ರಮಾಣ ಪತ್ರ, ಪಾಸ್‌ಪೋರ್ಟ್ ಅಳತೆಯ 2 ಇತ್ತೀಚಿನ ಭಾವಚಿತ್ರ ಮತ್ತು ವಿದ್ಯಾರ್ಹತೆ ಹಾಗೂ ಮೀಸಲಾತಿ ಬಗ್ಗೆ ಇರುವ ಮೂಲ ಪ್ರಮಾಣಪತ್ರ, ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣಪತ್ರ ಹಾಗೂ ಇತರೆ ದಾಖಲಾತಿಗಳನ್ನು ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ಹಾಜರುಪಡಿಸತಕ್ಕದ್ದು.
7. ಅಭ್ಯರ್ಥಿಯು ಸಲ್ಲಿಸುವ ಮೂಲ ದಾಖಲಾತಿಗಳಲ್ಲಿ ತಪ್ಪು ಮಾಹಿತಿ ಅಥವಾ ಸುಳ್ಳು ಎಂದು ಕಂಡು ಬಂದಲ್ಲಿ ಅಂತಹವರ ಆಯ್ಕೆಯನ್ನು ರದ್ದುಪಡಿಸಲಾಗುವುದು. ಸರ್ಕಾರದ ಸುತ್ತೋಲೆ ಸಂಖ್ಯೆ:ಕಂಇ/216/ಬಿಎಸ್‌ಸಿ/2013 ದಿನಾಂಕ:22.08.2013 ರಲ್ಲಿ ಸೂಚಿಸಲಾಗಿರುವಂತೆ, ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಕೆ.ಸಿ.ಎಸ್ (ಸಿಸಿಎ) ನಿಯಮಗಳನ್ವಯ 1957 ರ ಅಡಿಯಲ್ಲಿ ಶಿಸ್ತು ಕ್ರಮಕೈಗೊಳ್ಳಲಾಗುವುದು.
8. ಸದರಿ ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾದ ಕೂಡಲೇ ಮಹಾಲೇಖಪಾಲಕರು, ನಿರ್ದೇಶಕರು, ಜಿಲ್ಲಾ ಅಧಿಕಾರಿಗಳು, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ/ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಹಾಗೂ ಎಲ್ಲಾ ಸಂಬಂಧಪಟ್ಟ ಅಧಿಕಾರಿಗಳಿಗೆ ಸಿ.ಟಿ.ಸಿ.ಯನ್ನು ಕಳುಹಿಸತಕ್ಕದ್ದು.
9. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್ (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯಾ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ಕಚೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರುಪಡಿಸತಕ್ಕದ್ದು.
10. ಆಯ್ಕೆಯಾಗಿರುವ ಅಭ್ಯರ್ಥಿಯು ಅವರನ್ನು ನೇಮಿಸಿರುವ ಸ್ಥಳದಲ್ಲಿ ಕಡ್ಡಾಯವಾಗಿ ವಾಸ ಮಾಡಬೇಕು, ಮತ್ತು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ಸಂದರ್ಭದಲ್ಲಿ ನೋಟರಿ ಪ್ರಮಾಣ ಪತ್ರವನ್ನು ಹಾಜರು ಪಡಿಸಬೇಕು.
11. ಅಭ್ಯರ್ಥಿಯು ಸೇವೆಗೆ ಹಾಜರಾಗಿ ಭಾರತ ಸಂವಿಧಾನದ ರೀತ್ಯಾ **"ನಿಷ್ಠೆಯ ಪ್ರಮಾಣ ವಚನ ಸ್ವೀಕರಿಸುವುದು"**.
12. ಅಭ್ಯರ್ಥಿಯು ಸರ್ಕಾರದ ಆದೇಶ ನಂ. FD/SPL/04/PET/05 ದಿನಾಂಕ: 31.03.2016 ರಂತೆ ಹೊಸ ನಿವೃತ್ತಿ ವೇತನ ಯೋಜನೆಗೆ (NPS) ಒಳಪಟ್ಟಿರುತ್ತಾರೆ. ದಿನಾಂಕ: 01.04.2006 ರ ನಂತರ ಸರ್ಕಾರಿ ಸೇವೆಗೆ ನೇಮಕಗೊಂಡ ನೌಕರರ ಮೂಲ ವೇತನ ಮತ್ತು ತುಟಿಭತ್ಯೆಯ ಒಟ್ಟು ಮೊತ್ತದ ಶೇಕಡಾ 10% ರಷ್ಟು ಭಾಗವನ್ನು ಅವರ ಪ್ರತಿ ಮಾಹೆಯ ವೇತನದಲ್ಲಿ ನಿವೃತ್ತಿ ಸೌಲಭ್ಯದ ವಂತಿಕೆಯನ್ನು ಕಟಾಯಿಸಲಾಗುವುದು.
13. ಅಭ್ಯರ್ಥಿಯು ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಗಳು 1966 ಹಾಗೂ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಗಳು 1957 ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ದರಾಗಿರುತ್ತಾರೆ.
14. ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಬಗ್ಗೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು, ಹಾಗೂ ಇಲಾಖಾಧಿಕಾರಿಗಳು ನೀಡಿರುವ ನಿರಾಕ್ಷೇಪಣಾ ಪತ್ರವನ್ನು ಸಲ್ಲಿಸತಕ್ಕದ್ದು. ಅಂತಹ ಅಭ್ಯರ್ಥಿಗಳು ಇಲಾಖೆಯಿಂದ ಬಿಡುಗಡೆಯಾಗಿರುವ ಬಗ್ಗೆ ದೃಢೀಕರಣ ಪತ್ರವನ್ನು ಹಾಜರು ಪಡಿಸತಕ್ಕದ್ದು. ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ನಿಯಮಾವಳಿಗಳನ್ನು ಉಲ್ಲಂಘಿಸಿ ಅರ್ಜಿ ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು.
15. ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ154 ಎಸ್.ಸಿ.ಆರ್ 2014 ದಿನಾಂಕ: 27.04.2015ರ ಮೇರೆಗೆ ಅಭ್ಯರ್ಥಿಯು ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ನಿಗಧಿತ ಸಮಯದಲ್ಲಿ ಪಾಸು ಮಾಡತಕ್ಕದ್ದು.
16. ನೇಮಕಾತಿಗೊಳಿಸಿದ ಸ್ಥಳ/ಕಛೇರಿಯನ್ನು ಯಾವುದೇ ಕಾರಣಕ್ಕೂ ಬದಲಾವಣೆ ಮಾಡಲಾಗುವುದಿಲ್ಲ. ಸ್ಥಳ ಬದಲಾವಣೆ ಮಾಡುವಂತೆ ಒತ್ತಡ ತಂದಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿ ಆದೇಶವನ್ನು ರದ್ದುಗೊಳಿಸಲಾಗುವುದು.
17. ಹೈದ್ರಾಬಾದ್-ಕರ್ನಾಟಕ ಮೀಸಲಾತಿಯಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಯ ನೇಮಕಾತಿಯು, ಸಕ್ಷಮ ಪ್ರಾಧಿಕಾರಿಯಿಂದ ಅರ್ಹತಾ ಸಿಂಧುತ್ವ ಪ್ರಮಾಣಪತ್ರ ಸಲ್ಲಿಸುವಿಕೆಯ ನಿರ್ಬಂಧನೆಗೆ ಒಳಪಟ್ಟಿರುತ್ತದೆ.
18. ಸದರಿ ನೇಮಕಾತಿಯು ಮಾನ್ಯ ಉಚ್ಚ ನ್ಯಾಯಾಲಯದ ರಿಟ್ ಪಿಟಿಷನ್ ಸಂಖ್ಯೆ: 5933/2016, 201110/2016, 53860/2015, 5026/2016, 22925/2016, 27664–27680/2016, 110402/2015, ಹಾಗೂ ಕೆ.ಎ.ಟಿ ಅರ್ಜಿ ಸಂಖ್ಯೆ: 8368–579/2014, 8683–693/2014, 9027–92/2014, 9461–73/2014, 9496/2014, 4612/2015 ರಗಳ ಹಾಗೂ ಈ ನೇಮಕಾತಿಗೆ ಸಂಬಂಧಿತ ಇತರೆ ಪ್ರಕರಣಗಳ ತೀರ್ಪುಗಳಿಗೆ ಸದರಿ ಆದೇಶವು ಒಳಪಟ್ಟಿರುತ್ತದೆ.
19. ಕರ್ತವ್ಯ ನಿರ್ವಹಿಸಿದ ಪ್ರಥಮ ಮಾಹೆ ವೇತನವನ್ನು ನಿರ್ದೇಶಕರ ಕಚೇರಿಯಿಂದ ಅನುಮತಿ ಪಡೆದ ನಂತರವೇ ಪಡೆದುಕೊಳ್ಳತಕ್ಕದ್ದು.
20. ಸರ್ಕಾರಿ ಆದೇಶಗಳು, ನಿರ್ದೇಶಕರು, ಜಿಲ್ಲಾಅಧಿಕಾರಿಗಳು, ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ/ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಅಧಿಕಾರಿಗಳು, ಹಾಗೂ ಇತರೆ ಸಂಬಂಧಿತ ಅಧಿಕಾರಿಗಳ ಆದೇಶಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

21. ಅಭ್ಯರ್ಥಿಯ ಜೇಷ್ಠತೆಯನ್ನು ಕರ್ನಾಟಕ ಲೋಕಸೇವಾ ಆಯೋಗವು ನೀಡಿರುವ ಆಯ್ಕೆ ಪಟ್ಟಿಯ ಕ್ರಮಾಂಕದ ಆಧಾರದ ಮೇಲೆ ಪರಿಗಣಿಸಲಾಗುವುದು.

P.R. 94

SC-500

**ಅಕ್ರಂ ಪಾಷ, ಕೆ.ಎ.ಎಸ್**
ನಿರ್ದೇಶಕರು,
ಅಲ್ಪಸಂಖ್ಯಾತರ ನಿರ್ದೇಶನಾಲಯ,
ಬೆಂಗಳೂರು.

## ಅಲ್ಪಸಂಖ್ಯಾತರ ನಿರ್ದೇಶನಾಲಯ

**20ನೇ ಮಹಡಿ, ವಿ.ವಿ. ದೊಡ್ಡಗೋಪುರ, ಡಾ|| ಬಿ.ಆರ್. ಅಂಬೇಡ್ಕರ್ ವೀದಿ, ಬೆಂಗಳೂರು-01.**

**ಅಧಿಕೃತ ಜ್ಞಾಪನ**

**ಸಂಖ್ಯೆ : ಅಸಂನಿ/ಸಿಆರ್-ನೇಮಕಾತಿ/01/2016-17, ದಿನಾಂಕ : 16.05.2016**

**ವಿಷಯ :** ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯದಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ನೇಮಕಗೊಂಡ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ **ಪ್ರಾಂಶುಪಾಲರ** ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಬಗ್ಗೆ.

**ಉಲ್ಲೇಖ :**
1. ಕರ್ನಾಟಕ ಲೋಕಸೇವಾ ಆಯೋಗದ ಪ್ರಕಟಣೆ ಸಂಖ್ಯೆ: ಪಿಎಸ್‌ಸಿ 1 ಆರ್.ಟಿ.(4)ಬಿ-1/2014, ದಿನಾಂಕ: 25.09.2014.
2. ಕರ್ನಾಟಕ ಲೋಕಸೇವಾ ಆಯೋಗದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಪ್ರಾಂಶುಪಾಲರ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ನೇಮಕಾತಿ ಅಧಿಸೂಚನೆ ಸಂಖ್ಯೆ: ಪಿ.ಎಸ್.ಸಿ.06 ಆರ್.ಟಿ.ಬಿ. 2014 ದಿನಾಂಕ: 06.01.2016.
3. ಕರ್ನಾಟಕ ಲೋಕಸೇವಾ ಆಯೋಗದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವಿವಿಧ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪರಿಶೀಲಿಸಿ ಸಿಂಧುತ್ವ ಪ್ರಮಾಣ ಪತ್ರ ನೀಡುವ ಬಗ್ಗೆ ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಬರೆದ ಪತ್ರ ಸಂಖ್ಯೆ : ಅಂ.ಸ.ನಿ/ಕೆ.ಪಿ.ಎಸ್.ಸಿ/ನೇ/ಸಿಆರ್- /2015-16, ದಿನಾಂಕ: 02.02.2016.
4. ಕರ್ನಾಟಕ ಲೋಕಸೇವಾ ಆಯೋಗದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವಿವಿಧ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ವೈದ್ಯಕೀಯ ಪರೀಕ್ಷೆಗೆ ಒಳಪಡಿಸುವ ಬಗ್ಗೆ ಎಲ್ಲಾ ಜಿಲ್ಲೆಗಳ ಜಿಲ್ಲಾ ಶಸ್ತ್ರಚಿಕಿತ್ಸಕರಿಗೆ ಬರೆದ ಪತ್ರ ಸಂಖ್ಯೆ: ಅಂ.ಸ.ನಿ/ಕೆ.ಪಿ.ಎಸ್.ಸಿ/ನೇ/ಸಿಆರ್-/2015-16,ದಿನಾಂಕ: 04.02.2016.
5. ಕರ್ನಾಟಕ ಲೋಕಸೇವಾ ಆಯೋಗದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವಿವಿಧ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ಗುಣ ಮತ್ತು ನಡತೆ ಪರಿಶೀಲಿಸಿ ವರದಿ ನೀಡುವ ಬಗ್ಗೆ ಎಲ್ಲಾ ಜಿಲ್ಲೆಗಳ ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳಿಗೆ ಬರೆದ ಪತ್ರ ಸಂಖ್ಯೆ: ಅಂ.ಸ.ನಿ/ಕೆ.ಪಿ.ಎಸ್.ಸಿ/ನೇ/ಸಿಆರ್-/2015-16, ದಿನಾಂಕ: 04.02.2016.

ಅಲ್ಪಸಂಖ್ಯಾತರ ನಿರ್ದೇಶನಾಲಯದಲ್ಲಿನ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಪ್ರಾಂಶುಪಾಲರ ಹುದ್ದೆಗಳಿಗೆ ನೇಮಕಾತಿ ಕುರಿತಂತೆ ಉಲ್ಲೇಖ (1) ರಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಮುಖಾಂತರ ಪ್ರಕಟಣೆ ಹೊರಡಿಸಲಾಗಿತ್ತು.

ಮುಂದುವರೆಯುತ್ತಾ, ನೇಮಕಾತಿಯ ಎಲ್ಲಾ ಹಂತದ ಪ್ರಕ್ರಿಯೆಗಳನ್ನು ಪೂರ್ಣಗೊಳಿಸಿ ಉಲ್ಲೇಖ (2) ರಂತೆ ಅಂತಿಮ ಅಧಿಸೂಚನೆ ಹೊರಡಿಸಲಾಗಿದ್ದು, ಉಲ್ಲೇಖಿತ ಪತ್ರಗಳು 3, 4 ಹಾಗೂ 5 ರಂತೆ ನೇಮಕಾತಿ ಹೊಂದಿದ ಅಭ್ಯರ್ಥಿಗಳ ಸಿಂಧುತ್ವ ಪ್ರಮಾಣ ಪತ್ರ, ವೈದ್ಯಕೀಯ ಪ್ರಮಾಣ ಪತ್ರ ಹಾಗೂ ಗುಣ ಮತ್ತು ನಡತೆಯ ಪ್ರಮಾಣ ಪತ್ರಗಳಿಗಾಗಿ ಸಂಬಂಧಿತ ಪ್ರಾಧಿಕಾರಗಳಿಗೆ ಪತ್ರಗಳನ್ನು ಬರೆದು, ಎಲ್ಲಾ ಸಂಬಂದಪಟ್ಟ ಪ್ರಮಾಣಪತ್ರಗಳನ್ನು ಪಡೆಯಲಾಗಿರುತ್ತದೆ. ಆಯ್ಕೆಯಾದ ಅಭ್ಯರ್ಥಿಗಳ ಮೆರಿಟ್ ಹಾಗೂ ವರ್ಗವಾರು ಆಧಾರದ ಮೇಲೆ ಕೌನ್ಸಿಲಿಂಗ್ ಮೂಲಕ ಈ ಕೆಳಕಂಡ ಅಭ್ಯರ್ಥಿಗಳನ್ನು ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ **ಪ್ರಾಂಶುಪಾಲ ಗ್ರೂಪ್ 'ಬಿ' ಹುದ್ದೆಗಳಿಗೆ ರೂ.22800-43200** ವೇತನಶ್ರೇಣಿಯಲ್ಲಿ ಈ ಕೆಳಕಂಡ ಷರತ್ತುಗೊಳಪಡಿಸಿ, ಅವರ ಹೆಸರಿನ ಮುಂದೆ ಸೂಚಿಸಲಾಗಿರುವ ಸ್ಥಳಗಳಿಗೆ ನೇಮಕಾತಿ ಮಾಡಿ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

| SL NO. | NAME OF THE CANDIDATE | REG.NO.<br>D O B<br>RESVN.<br>QUALIFICATION | School and Place of Appointment and Posting |
|---|---|---|---|
| 1 | 2 | 3 | 4 |
| 1 | MURALI G<br>KARAMANGALA VILLAGE AND POST<br>BANGARPET TALUK BANGARPET<br>KOLAR-563114 | 113138<br>07/04/83<br>GM/CAT1<br>MA B.Ed | Morarji Desai Residential School<br>**Kaivara (Masthena Halli)**<br>Chinthamani Taluk<br>Chikkaballapur Dist |

